# PACKAGE TOURS - 2019

**Hotel Room Accom. & South Indian Veg. Food**

## Charodham Yatra



**19 Days**

May 06, 21
Jun 06
Sep 05, 16, 22
Oct 06, 09

Haridwar, Yamunotri, Gangotri, Uttarkashi, Kedarnath, Triyugi (Optional), Mana, Vyasa Guha, Ganesh Guha, Keshava Prayag, Badrinath, Rishikesh, New Delhi

## Shaktipeetha Manali Special



**18 Days**

Sep 05
Oct 09

Attari Border [Indo-Pak Border], Amritsar, Vaishnavi Devi, Chamunda, Kangra, Chintapurni, Jwalamukhi, Baijnath, Kullu-Manali, Vasista, Rohtang Pass [Optional], Naina Devi, Kufri, Shimla, Chandigarh, Kurukshetra, New Delhi

## SRI LANKA



**07 Days**

Apr 22

Negombo, Trincomalee, Dambulla, Kandy, Ramboda, Nuwara Eliya, Ramayana Trail, Colombo

## Nepal Special



**08 Days**

May 25
Sep 05

Kathmandu, Manokamana, Pokhara, Jomsom, Mukthinath, Patan

## KAILASH & MANASA SAROVAR YATRA

**11 Days**

May 31
Jun 06, 11
July 04, 16
Aug 27 Sep 05





# Shri Hansaa Travels

**Recognised by Department of Tourism, Govt. of Karnataka**

: 640, 40th Cross, 8th Block, Jayanagar, Bangalore - 70

: hansaatravels@gmail.com : hansaatravels.com

080-26643276 / 26543891 / 9341215612 / 9341415612



# ವಿವೇಕಪ್ರಭ

ಏಪ್ರಿಲ್-2019 ಸಂಪುಟ 20 ಸಂಚಿಕೆ 04







## ವಿಶೇಷ ಲೇಖನ



## ಧಾರಾವಾಹಿ









ವ್ಯವಸ್ಥಾಪಕ ಸಂಪಾದಕರು: ಸ್ವಾಮಿ ಆತ್ಮಜ್ಞಾನಂದ

ಸಂಪಾದಕರು: ಸ್ವಾಮಿ ಜ್ಞಾನಯೋಗಾನಂದ

ನೆರವು: ಆರ್. ಎಸ್. ಪೂರ್ಣಾನಂದ,
ಡಾ. ಕೆ. ಎಲ್. ಪ್ರಸನ್ನಾಕ್ಷೀ,
ಡಾ. ಎಚ್. ಪಾಂಡುರಂಗ ವಿಠಲ

ಅಕ್ಷರ ಜೋಡಣೆ: ಶ್ರೀರಾಮಕೃಷ್ಣ ಆಶ್ರಮ, ಮೈಸೂರು

ಮುದ್ರಣ: ಮಯೂರ್ ಗ್ರಾಫಿಕ್ಸ್, ಬೆಂಗಳೂರು


ಮುಖಪುಟ

ಶಾಂತಿಯ ಉದಯ

### ಚಂದಾ ವಿವರ

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ: $ 60
ಆಜೀವ (25ವರ್ಷ): $ 300
ಪೋಷಕರು : $ 600 ಅಥವಾ ಹೆಚ್ಚು.

### ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

- ಸ್ವಾಮಿ ವಿವೇಕಾನಂದ

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.


E-mail: mysuru.vivekaprabha@rkmm.org
Website: www.vivekaprabha.net
ಫೋನ್ : 9481533505

# ವಿಶ್ವಶಾಂತಿ ಪ್ರಾರ್ಥನೆ

**ಶೈವಾನಾಮೀಶ್ವರೋ ವಿಷ್ಣುರ್ವೈಷ್ಣವಾನಾಂ ಚ ಸಂಮತಃ ।**
**ದೇವೀತಿ ಶಾಕ್ತತಂತ್ರೇ ಚ ಬುದ್ಧೋ ಬೌದ್ಧಸುಪೂಜಿತಃ ॥**

**ಅರ್ಹಂತೋ ಜೈನಧರ್ಮಸ್ಯ ಕ್ರೈಸ್ತಾನಾಂ ಕ್ರಿಸ್ತ ಏವ ಚ ।**
**ಜಿಹೋವಶ್ಚ ಯಹೂದ್ಯಾನಾಮಲ್ಲಾ ಮಾಹಮ್ಮದಸ್ಯ ಚ ॥**

**ಪರ್ಶ್ಯೈರಾಹೂರಮಾಸ್ದೇತಿ ಫಾರಸೀಕೈಶ್ಚ ಕಥ್ಯತೇ ।**
**ಏವಂ ಯಜ್ಜ್ಯೋತಿರಾಭಾತಿ ತಜ್ಜ್ಯೋತಿಶ್ಶಂ ಕರೋತು ನಃ ॥**

ಶೈವರ ಶಿವನೂ, ವೈಷ್ಣವರಿಗೆ ಸಮ್ಮತನಾದ ವಿಷ್ಣುವೂ, ಶಾಕ್ತ ತಂತ್ರದಲ್ಲಿ ದೇವಿಯೆಂದು (ಪ್ರಸಿದ್ಧಳಾದವಳೂ), ಬೌದ್ಧರಿಂದ ಪೂಜಿಸಲ್ಪಟ್ಟ ಬುದ್ಧನೂ, ಜೈನಧರ್ಮದ ಅರ್ಹಂತರೂ, ಕ್ರೈಸ್ತರ ಕ್ರಿಸ್ತನೂ, ಯೆಹೂದ್ಯರ ಜಿಹೋವನೂ, ಮಹಮ್ಮದೀಯರ ಅಲ್ಲಾನೂ ಆದ, ಪಾರಸೀಕರಿಂದ ಆಹೂರಮಾಸ್ದ ಎಂದು ಹೇಳಲ್ಪಡುವ, ಯಾವ ಪರಂಜ್ಯೋತಿಯು ಬೆಳಗುತ್ತಿರುವುದೋ ಅದು ನಮ್ಮೆಲ್ಲರಿಗೂ ಶುಭವನ್ನುಂಟುಮಾಡಲಿ!

— ಸ್ವಾಮಿ ಹರ್ಷಾನಂದ

**ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ**
**ನ್ಯಾಯೇನ ಮಾರ್ಗೇಣ ಮಹೀಂ ಮಹೀಶಾಃ ।**
**ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ**
**ಲೋಕಾಃ ಸಮಸ್ತಾಃ ಸುಖಿನೋ ಭವಂತು ॥**

ಎಲ್ಲರಿಗೂ ಒಳ್ಳೆಯದಾಗಲಿ, ರಾಜರುಗಳು ನ್ಯಾಯ ಮಾರ್ಗದಿಂದ ಭೂಮಿಯನ್ನು ಆಳುವಂತಾಗಲಿ. ಎಲ್ಲ ಜೀವಿಗಳಿಗೂ ಶುಭವುಂಟಾಗಲಿ, ಇಡೀ ಜಗತ್ತಿಗೆ ಸುಖವುಂಟಾಗಲಿ.

**ಸರ್ವಸ್ತರತು ದುರ್ಗಾಣಿ ಸರ್ವೋ ಭದ್ರಾಣಿ ಪಶ್ಯತು ।**
**ಸರ್ವಸ್ಸದ್ಬುದ್ಧಿಮಾಪ್ನೋತು ಸರ್ವಃ ಸರ್ವತ್ರ ನಂದತು ॥**

ಎಲ್ಲರೂ ಕಷ್ಟದಿಂದ ಪಾರಾಗಲಿ, ಎಲ್ಲರೂ ಶುಭವನ್ನು ನೋಡುವಂತಾಗಲಿ, ಎಲ್ಲರಿಗೂ ಸದ್ಬುದ್ಧಿಯುಂಟಾಗಲಿ, ಎಲ್ಲರೂ ಆನಂದದಿಂದಿರಲಿ.

**ಸರ್ವೇ ಭವಂತು ಸುಖಿನಃ ಸರ್ವೇ ಸಂತು ನಿರಾಮಯಾಃ ।**
**ಸರ್ವೇ ಭದ್ರಾಣಿ ಪಶ್ಯಂತು ಮಾ ಕಶ್ಚಿತ್ ದುಃಖಭಾಗ್ ಭವೇತ್॥**

ಎಲ್ಲರೂ ಸುಖಿಗಳಾಗಲಿ, ಎಲ್ಲರೂ ರೋಗಮುಕ್ತರಾಗಲಿ, ಎಲ್ಲರೂ ಶುಭವನ್ನು ನೋಡುವಂತಾಗಲಿ, ಯಾರೂ ದುಃಖಕ್ಕೆ ಒಳಗಾಗದಿರಲಿ.

**ಕಾಲೇ ವರ್ಷತು ಪರ್ಜನ್ಯಃ ಪೃಥ್ವೀ ಸಸ್ಯಶಾಲಿನೀ ।**
**ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಸ್ಸಂತು ನಿರ್ಭಯಾಃ॥**

ಸರಿಯಾದ ಸಮಯಕ್ಕೆ ಮಳೆಯಾಗಲಿ, ಭೂಮಿಯು ಸಸ್ಯ ಸಂಪತ್ತಿನಿಂದ ಶೋಭಿಸಲಿ, ಈ ದೇಶದಲ್ಲಿ ಅಶಾಂತಿ ಇಲ್ಲದಿರಲಿ, ಸತ್ಪುರುಷರು ನಿರ್ಭಯರಾಗಿರಲಿ.

ಸೂಕ್ತಿಪ್ರಭ

## ಧರ್ಮ

ಧಾರಣೆ ಮಾಡುವುದರಿಂದ 'ಧರ್ಮ' ಎನ್ನುತ್ತಾರೆ. ಧರ್ಮವು ಪ್ರಜೆಗಳನ್ನು ಧರಿಸುತ್ತದೆ. ಯಾವುದರಲ್ಲಿ ಧಾರಣೆಯುಂಟೋ ಅದು ಧರ್ಮವೆಂದು ನಿಶ್ಚಯ.

— ಮಹಾಭಾರತ

ತೃಪ್ತಿ , ತಾಳ್ಮೆ, ಸಿಟ್ಟು ಮೊದಲಾದುವನ್ನು ನಿಗ್ರಹಿಸುವುದು, ಅನ್ಯಾಯದಿಂದ ಇತರರ ದ್ರವ್ಯವನ್ನು ತೆಗೆದುಕೊಳ್ಳದೇ ಇರುವುದು, ಶುಚಿಯಾಗಿರುವುದು, ಇಂದ್ರಿಯಗಳ ನಿಗ್ರಹ, ಶಾಸ್ತ್ರಜ್ಞಾನ, ಸತ್ಯ , ಶಾಂತಿ ಇವು ಹತ್ತು ಧರ್ಮವೆನಿಸುತ್ತವೆ.

— ಮನುಸ್ಮೃತಿ

ಯಾರು ಧರ್ಮವನ್ನು ರಕ್ಷಿಸುತ್ತಾರೋ ಅವರನ್ನು ಧರ್ಮವು ರಕ್ಷಿಸುತ್ತದೆ.

— ಸುಭಾಷಿತ

ಧರ್ಮದಿಂದಲೇ ಅರ್ಥ, ಧರ್ಮದಿಂದಲೇ ಸುಖ. ಸಕಲ ಅಭೀಷ್ಟವೂ ಧರ್ಮದಿಂದ ಕೈಗೂಡುತ್ತದೆ. ಈ ಜಗತ್ತು ಧರ್ಮದ ತಳಹದಿಯ ಮೇಲೆ ನಿಂತಿದೆ.

— ರಾಮಾಯಣ

ಹಣ, ಜೀವ, ಜನ್ಮ, ದೇಹ ಇವೆಲ್ಲವೂ ಕಾಲಾನುಕ್ರಮದಲ್ಲಿ ಮಾಯವಾಗುವುವು. ಧರ್ಮವೊಂದೇ ಉಳಿಯುವುದು.

— ಚಾಣಕ್ಯ

ಧರ್ಮವೆಂದರೆ ಮಾತಲ್ಲ, ಸಿದ್ಧಾಂತವಲ್ಲ, ಶಾಸ್ತ್ರವು ಅಲ್ಲ, ಅದು ಸಾಕ್ಷಾತ್ಕಾರ ಎಂಬುದನ್ನು ನೀವು ಗಮನದಲ್ಲಿಡಬೇಕು. ಅದೆಂದರೆ ಕಲಿಯುವುದಲ್ಲ— ಪಡೆಯುವುದು, ಸಾಕ್ಷಾತ್ಕಾರ.

— ಸ್ವಾಮಿ ವಿವೇಕಾನಂದ






# ಶ್ರೀರಾಮಕೃಷ್ಣ ಆಶ್ರಮ, ನೆಟ್ಟಾಯಂ

(ರಾಮಕೃಷ್ಣ ಮಠ, ಬೇಲೂರು ಮಠ, ಪಶ್ಚಿಮ ಬಂಗಾಳ ಇದರ ಒಂದು ಶಾಖಾಕೇಂದ್ರ)

**ಶಾಸ್ತಾಮಂಗಲಂ, ತಿರುವನಂತಪುರ 695 010**

ಫೋ: 0471 – 2722125, 2722453, 2726603, 2727393

Email: thiruvananthapuram@rkmm.org

ಆತ್ಮೀಯ ಭಕ್ತರೇ,

ನಮ್ಮ ಹೃತ್ಪೂರ್ವಕ ನಮಸ್ಕಾರಗಳು ಹಾಗೂ ಪ್ರಾರ್ಥನೆಗಳು.

ತಿರುವನಂತಪುರದ ನೆಟ್ಟಾಯಂ ನಲ್ಲಿರುವ ಶ್ರೀರಾಮಕೃಷ್ಣ ಆಶ್ರಮ ದೇವಾಲಯವು 1916 ರಿಂದ 1924ರ ಅವಧಿಯಲ್ಲಿ ನಿರ್ಮಾಣಗೊಂಡಿತು. ಶ್ರೀರಾಮಕೃಷ್ಣರ ಮಾನಸಪುತ್ರರೂ, ರಾಮಕೃಷ್ಣ ಮಹಾಸಂಘದ ಪ್ರಥಮ ಅಧ್ಯಕ್ಷರೂ ಆಗಿದ್ದ ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಮಹಾರಾಜ್ 1916ರಲ್ಲಿ ಈ ಆಶ್ರಮದ ಶಿಲಾನ್ಯಾಸವನ್ನು ನೆರವೇರಿಸಿದರು; ಸ್ವಾಮಿ ನಿರ್ಮಲಾನಂದಜಿ ಮಹಾರಾಜ್ 1924ರಲ್ಲಿ ಅದರ ಉದ್ಘಾಟನೆಯನ್ನು ಮಾಡಿದರು. ಶ್ರೀರಾಮಕೃಷ್ಣರ ಇನ್ನೊಬ್ಬರು ನೇರ ಶಿಷ್ಯರಾದ ಪೂಜ್ಯ ಸ್ವಾಮಿ ವಿಜ್ಞಾನಾನಂದಜಿ ಮಹಾರಾಜ್ ಅವರು ಈ ಆಶ್ರಮಕ್ಕೆ ಭೇಟಿ ನೀಡಿದ್ದು, ಈ ದೇವಾಲಯದಲ್ಲಿ ಅವರಿಗೆ ಶ್ರೀರಾಮಕೃಷ್ಣರ ದರ್ಶನವೂ ಆಗಿತ್ತು. ತಿರುವನಂತಪುರದ ನೆಟ್ಟಾಯಂನಲ್ಲಿರುವ ಬೆಟ್ಟದ ತುದಿಯಲ್ಲಿ ಈ ದೇವಾಲಯವಿದೆ. ನೂರು ವರ್ಷ ಹಳೆಯದಾದ ಈ ಆಶ್ರಮವು ಜಪ, ಧ್ಯಾನ, ಪ್ರಾರ್ಥನೆಗಳಿಗೆ ಆದರ್ಶದ ಸ್ಥಾನವಾಗಿದೆ; ಪ್ರಾಮಾಣಿಕ ಆಧ್ಯಾತ್ಮಿಕ ಸಾಧಕರಿಗೆ ಸ್ಫೂರ್ತಿಯ ಕೇಂದ್ರವಾಗಿದೆ. ರಾಮಕೃಷ್ಣ ಮಠದ ಅನೇಕ ಹಿರಿಯ ಸಂನ್ಯಾಸಿಗಳು ಇಲ್ಲಿ ತಪಸ್ಸನ್ನು ಆಚರಿಸಿದ್ದಾರೆ. ಈ ಪ್ರಶಾಂತ, ನಿಶ್ಶಬ್ದ ಹಾಗೂ ಪವಿತ್ರ ವಾತಾವರಣಕ್ಕೆ ಭೇಟಿ ನೀಡಿದ ಪ್ರಾಮಾಣಿಕ ಸಾಧಕರು ಇಲ್ಲಿನ ಆಧ್ಯಾತ್ಮಿಕ ತರಂಗವನ್ನು ಅನುಭವಿಸಿದ್ದಾರೆ, ಹಾಗೂ ಅದನ್ನು ಕೆಲವೊಮ್ಮೆ ವ್ಯಕ್ತಪಡಿಸಿದ್ದಾರೆ.

ಸಾಕಷ್ಟು ವರ್ಷ ಹಳೆಯದಾದ ಈ ಪವಿತ್ರ ದೇವಾಲಯವು ಈಗ ಪಾಳುಬಿದ್ದಿರುವ ಸ್ಥಿತಿಯಲ್ಲಿದ್ದು, ಮಳೆಗಾಲದಲ್ಲಿ ಕಟ್ಟಡದ ಅನೇಕ ಕಡೆ ಸೋರುತ್ತಿದ್ದು, ಈ ಕಟ್ಟಡವನ್ನು ಮುಂದಿನ ಪೀಳಿಗೆಗೆ ಉಳಿಸುವುದಕ್ಕೋಸ್ಕರ ಇದಕ್ಕೆ ತುರ್ತಾಗಿ ನವೀಕರಣದ ಅಗತ್ಯವಿದೆ. ಈ ನವೀಕರಣ ಕಾರ್ಯದಲ್ಲಿ ಕಟ್ಟಡ ನಿರ್ಮಾಣ, ವಿದ್ಯುಚ್ಛಕ್ತೀಕರಣ ಹಾಗೂ ಇತರ ರಚನಾತ್ಮಕ ಕೆಲಸಗಳಿಗಾಗಿ ಸುಮಾರು 52 ಲಕ್ಷ ರೂ. ವೆಚ್ಚ ತಗಲುವುದೆಂದು ಅಂದಾಜು ಮಾಡಲಾಗಿದೆ. ಈ ಮಹತ್ಕಾರ್ಯವನ್ನು ಆದಷ್ಟು ಬೇಗನೆ ಕೈಗೊಳ್ಳುವುದಕ್ಕಾಗಿ ಆಶ್ರಮವು ತಕ್ಷಣವೇ ಧನಸಂಗ್ರಹ ಮಾಡಬೇಕಾಗಿದೆ. ಇದೇ ಬರುವ 2019ರ ಮೇ ತಿಂಗಳಲ್ಲಿ ಈ ದೇವಾಲಯದಲ್ಲಿ ನಡೆಯಲಿರುವ ಅಖಿಲ ಕೇರಳ ರಾಮಕೃಷ್ಣ ಭಕ್ತ ಸಮ್ಮೇಳನದ ವೇಳೆಗೆ ಈ ಕಾರ್ಯವು ಪೂರ್ಣಗೊಳ್ಳಬೇಕಾಗಿದೆ.

ಈ ಮಹತ್ಕಾರ್ಯಕ್ಕೆ ನೆರವಾಗಲು ತಾವು ಉದಾರವಾಗಿ ಧನಸಹಾಯ ಮಾಡುವ ಮೂಲಕ ಶ್ರೀರಾಮಕೃಷ್ಣರ ಕೃಪೆಗೆ ಪಾತ್ರರಾಗಬೇಕೆಂದು ತಮ್ಮಲ್ಲಿ ನಾವು ಹೃತ್ಪೂರ್ವಕ ವಿನಂತಿಸಿಕೊಳ್ಳುತ್ತೇವೆ.

ದಿವ್ಯತ್ರಯರ ಕೃಪಾಶೀರ್ವಾದಗಳಿಗಾಗಿ ಪ್ರಾರ್ಥಿಸುತ್ತ,

ಶ್ರೀರಾಮಕೃಷ್ಣರಲ್ಲಿ ತಮ್ಮ,

ಡಿಸೆಂಬರ್ 5, 2018

**ಸ್ವಾಮಿ ಮೋಕ್ಷವ್ರತಾನಂದ**

ಅಧ್ಯಕ್ಷರು

ದೇಣಿಗೆಗಳನ್ನು "Sri Ramakrishna Ashrama, Thiruvananthapuram" ಎಂಬ ಹೆಸರಿಗೆ ತೆಗೆದು ಕಳುಹಿಸಬಹುದು. ಅಥವಾ ಈ ಕೆಳಗಿನ ಯಾವುದೇ ಬ್ಯಾಂಕಿಗೆ ನೇರವಾಗಿ (8289916882 ಈ ಮೊ.ಫೋನ್‌ಗೆ SMS ನೊಂದಿಗೆ) ನೆಟ್ ಬ್ಯಾಂಕಿಂಗ್ ಮೂಲಕ ಪಾವತಿಸಬಹುದು:

Savings a/c Name & No.

1. State Bank: Sri Ramakrishna Ashrama Charitable Hospital **30549599482**
   IFSC: **SBIN0004685** Jawaharnagar Branch
2. Syndicate Bank: Sri Ramakrishna Ashrama Charitable Hospital **40182200003630**
   IFSC: **SYNB0004018** Sasthamangalam Branch
3. Canara Bank: Sri Ramakrishna Ashrama Charitable Hospital **0821101007005**
   IFSC: **CNRB 0000821** Sasthamangalam Branch
4. FCRA a/c: Sri Ramakrishna Ashrama Charitable Hospital **0821101008404**
   SWIFT Code: **CNRBINBBTDC**



# ಶ್ರೀರಾಮಕೃಷ್ಣ ಮಿಷನ್ ಬಾಲಕಾಶ್ರಮ

**ಉಚಿತ ವಿದ್ಯಾರ್ಥಿನಿಲಯ (ಶಿಕ್ಷಣ-ಊಟ-ವಸತಿ ಸೌಲಭ್ಯಗಳು)**

**ಮಂಗಳಾದೇವಿ, ಮಂಗಳೂರು. ಫೋನ್: 0824-2414216**

Website: www.mangaloremath.org, Email: mangaloremath@gmail.com

## ಮಂಗಳೂರಿನ ರಾಮಕೃಷ್ಣ ಮಿಷನ್ನಿನ ಉಚಿತ ವಿದ್ಯಾರ್ಥಿ ನಿಲಯಕ್ಕೆ ಅರ್ಜಿ ಆಹ್ವಾನ

ಆರ್ಥಿಕವಾಗಿ ಹಿಂದುಳಿದ ಗ್ರಾಮೀಣ ಪ್ರದೇಶದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಶಿಸ್ತುಬದ್ಧ ವಿದ್ಯಾಭ್ಯಾಸ ನೀಡುವ ಉದ್ದೇಶದಿಂದ ಮಂಗಳೂರು ಶ್ರೀರಾಮಕೃಷ್ಣ ಬಾಲಕಾಶ್ರಮವು ಅರ್ಹ ವಿದ್ಯಾರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ಆಶ್ರಮದ ವಾತಾವರಣದಲ್ಲಿ, ಸ್ವಾಮೀಜಿಯವರ ಮೇಲ್ವಿಚಾರಣೆಯಲ್ಲಿ ವಿದ್ಯಾರ್ಥಿಗಳು ಶಿಕ್ಷಣ ಮತ್ತು ಇನ್ನಿತರ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮುಂದುವರಿಯಲು ತರಬೇತಿ ನೀಡಲಾಗುತ್ತದೆ. ಶಿಕ್ಷಣ, ಊಟ, ವಸತಿಗಳನ್ನು ಉಚಿತವಾಗಿ ಒದಗಿಸಲಾಗುವುದು.

**ಅರ್ಜಿ ಸಲ್ಲಿಸಬಯಸುವವರಿಗೆ ಸೂಚನೆಗಳು:** 7 ನೇ ತರಗತಿಯಲ್ಲಿ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾದ, ಗಂಡುಮಕ್ಕಳು ಮಾತ್ರ ಅರ್ಜಿಯನ್ನು ಸಲ್ಲಿಸಬಹುದು. **8 ನೇ ತರಗತಿಗೆ ಮಾತ್ರ ಪ್ರವೇಶ.** ದಕ್ಷಿಣ ಕನ್ನಡ, ಉಡುಪಿ, ಉತ್ತರ ಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು ಹಾಗೂ ಕಾಸರಗೋಡು ಜಿಲ್ಲೆಯ ವಿದ್ಯಾರ್ಥಿಗಳು ಅರ್ಜಿಯನ್ನು ಸಲ್ಲಿಸಬಹುದು.

ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ **: 5.5.2019, ಭಾನುವಾರ**

ಹೆಚ್ಚಿನ ಮಾಹಿತಿಗಾಗಿ ಹಾಗೂ ನಿಯಮಾವಳಿಗಾಗಿ ತಕ್ಷಣ ಸಂಪರ್ಕಿಸಿ :

**ಶ್ರೀ ರಾಮಕೃಷ್ಣ ಮಿಷನ್ ಬಾಲಕಾಶ್ರಮ**
**ಮಂಗಳಾದೇವಿ, ಮಂಗಳೂರು, 575 001**
**ಫೋನ್: 0824-241 4216**

(ಸಮಯ: ಬೆಳಿಗ್ಗೆ 8 ರಿಂದ ಮಧ್ಯಾಹ್ನ 12 ರವರೆಗೆ ಮತ್ತು ಸಂಜೆ 4 ರಿಂದ 6.00 ಗಂಟೆಯವರೆಗೆ)



# ವಿವೇಕಪ್ರಭ

**ರಾಮಕೃಷ್ಣ ಮಹಾಸಂಘದ ಕನ್ನಡ ಮಾಸಪತ್ರಿಕೆ**

ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ ಕಾರ್ಯಾಲಯ, ಯಾದವಗಿರಿ, ಮೈಸೂರು 570 020

E-mail: mysuru.vivekaprabha@rkmm.org Website: www.vivekaprabha.net ಫೋನ್: 9481533505



## 'ವಿವೇಕಪ್ರಭ' ವಾರ್ಷಿಕ ಸಂಚಿಕೆ

2018ರ ಎಲ್ಲ ಸಂಚಿಕೆಗಳು ಒಂದೇ ಪ್ಯಾಕ್‌ನಲ್ಲಿ ಲಭ್ಯವಿದೆ. ಈ ಅಮೂಲ್ಯ ಸಂಗ್ರಾಹ್ಯ ಸಂಚಿಕೆಗಳ ಕೆಲವೇ ಪ್ರತಿಗಳು ಉಳಿದಿವೆ. ಇವುಗಳನ್ನು ಪಡೆಯಬಯಸುವವರು ಆದಷ್ಟು ಬೇಗನೆ ಇದಕ್ಕೆ ತಗಲುವ ಮೊತ್ತವನ್ನು **M.O., D.D.** ಅಥವಾ ನೆಟ್ ಬ್ಯಾಂಕಿಂಗ್ ಮೂಲಕ ಕಳುಹಿಸಿ ತಮ್ಮ ಪ್ರತಿಗಳನ್ನು ಕಾಯ್ದಿರಿಸಿಕೊಳ್ಳಬೇಕು.

ಸಾಧಾರಣ ಪ್ಯಾಕ್: **ರೂ. 250** (ಅಂಚೆವೆಚ್ಚ ಸೇರಿ)
ಬೈಂಡಿಂಗ್ ಪ್ಯಾಕ್: **ರೂ. 300** (ಅಂಚೆವೆಚ್ಚ ಸೇರಿ)

*(ವಿ.ಸೂ: ಸೀಮಿತ ಸಂಖ್ಯೆಯಲ್ಲಿ 2016 ಹಾಗೂ 2017ರ ವಾರ್ಷಿಕ ಸಂಚಿಕೆಗಳು ಕೂಡ ಲಭ್ಯವಿವೆ.)*

**ನೇರವಾಗಿ ನೆಟ್ ಬ್ಯಾಂಕಿಂಗ್ ಮೂಲಕ ಹಣ ಪಾವತಿಸಲು ಅಗತ್ಯವಾದ ಮಾಹಿತಿ:**

**Vivekaprabha Department, Corporation Bank, Vontikoppal Branch, V.V.Mohalla, Mysore 570 002.**

**SB A/c No: 520101237240455, IFSC Code: CORP0000274.** *ಹಣ ವರ್ಗಾವಣೆ ಮಾಡಿದ ಬಳಿಕ ಇ-ಮೇಲ್ ಮೂಲಕ* ***(mysuru.vivekaprabha@rkmm.org)*** *ನಿಮ್ಮ ಹೆಸರು, ವಿಳಾಸ, ಪಿನ್‌ಕೋಡ್, ಫೋನ್ ನಂ. ಇತ್ಯಾದಿ ವಿವರಗಳನ್ನು ತಿಳಿಸುವುದು ಅತ್ಯಗತ್ಯ.*

# ಪ್ರಪಂಚ, ಪರಮಾರ್ಥ

ಎಲ್ಲ ಜೀವಿಗಳಂತೆ ಮಾನವನೂ ಈ ಪ್ರಪಂಚದಲ್ಲೇ ಹುಟ್ಟಿ ಬೆಳೆದಿದ್ದಾನೆ; ಇಲ್ಲೇ ಉಂಡು, ತಿಂದು, ನಿದ್ರಿಸಿ, ಓಡಾಡುತ್ತ ಜೀವನ ನಡೆಸುತ್ತಿದ್ದಾನೆ. ಭೂಮಿಯನ್ನು ಆಶ್ರಯಿಸಿ ಆಹಾರ, ನೀರು, ಗಾಳಿ, ಆಶ್ರಯಸ್ಥಾನ ಮುಂತಾದವುಗಳು ಲಭಿಸಿದರೆ, ಸೂರ್ಯ, ನಕ್ಷತ್ರ, ಅಂತರಿಕ್ಷ ಮುಂತಾದವುಗಳಿಂದ ಅಗತ್ಯವಾದ ಇತರ ಅಂಶಗಳು ಲಭಿಸುತ್ತವೆ. ಬೇರೆ ಜೀವಿಗಳಿಗೆ ಹೋಲಿಸಿದರೆ ಮಾನವನು ಹೆಚ್ಚು ಸುಖಿಯೆನ್ನಬೇಕು — ತನ್ನ ಮನಸ್ಸು, ಬುದ್ಧಿಗಳ ಸಹಾಯದಿಂದ ಪ್ರಪಂಚದ ಹಲವು ವಸ್ತುಗಳನ್ನು ತನಗೆ ಬೇಕಾದಂತೆ ಬಳಸಿಕೊಳ್ಳಲು ಅವನು ಕಲಿತಿದ್ದಾನೆ. ತನ್ನ ಬುದ್ಧಿಯ ಕಾರಣದಿಂದ ಅವನು ಇಡೀ ಪ್ರಕೃತಿಯನ್ನೇ ನಿಯಂತ್ರಿಸಿಕೊಂಡ, ಸಮಸ್ತ ಪ್ರಪಂಚವನ್ನು ಇನ್ನಷ್ಟು ಪರಿಶೋಧಿಸುತ್ತ ಹೆಚ್ಚಿನ ಬಳಕೆ ಮಾಡಿಕೊಳ್ಳಲು ಕಲಿತ. ಇಷ್ಟಾದರೂ ಮಾನವನಲ್ಲಿ ಸುಖದ ಬಯಕೆ, ಅಗತ್ಯಗಳ ಪೂರೈಕೆ ಮುಗಿದೇ ಹೋಯಿತು ಎನ್ನುವಂತಿಲ್ಲ.

ಮಾನವನ ಆಸೆ, ಬಳಕೆ, ಅನ್ವೇಷಣೆಗಳಿಗೆ ಕೊನೆಯೇ ಇಲ್ಲದಾಗಿದೆ. ಇದು ಈ ರೀತಿ ಮುಂದುವರಿದರೆ, ಮಾನವನು ತಲುಪುವ ಅಂತಿಮ ಹಂತವಾದರೂ ಯಾವುದು? ಪ್ರಪಂಚದಿಂದ ನಮಗೆ ಬೇಕಾದುದಾದರೂ ಏನು? ಪ್ರಪಂಚ ಅಸ್ತಿತ್ವದಲ್ಲಿರುವುದಾದರೂ ಏಕೆ? ಕೇವಲ ಮಾನವನ ಬಳಕೆಗಾಗಿಯೆ? ಮಾನವನು ಪ್ರಪಂಚದಲ್ಲಿ ಇದ್ದುಕೊಂಡು ಯಾವ ರೀತಿ ಬದುಕಬೇಕು? — ಈ ಪ್ರಶ್ನೆಗಳು ಸಹಜವಾಗಿ ಏಳುತ್ತವೆ. ಪ್ರಕೃತಿಯ ಮಿತಿಮೀರಿದ ಲೂಟಿ, ನಿಯಂತ್ರಣಗಳಿಂದ ಮಾನವ ಈಗಾಗಲೇ ಹಲವು ದುಷ್ಪರಿಣಾಮಗಳನ್ನು ಎದುರಿಸುತ್ತಿದ್ದಾನೆ. ಜಾಗತಿಕ ತಾಪಮಾನದ ಏರುವಿಕೆ, ಅಂತರ್ಜಲದ ಅಭಾವ, ವಾತಾವರಣದ ವೈಪರೀತ್ಯ, ಅರಣ್ಯನಾಶ ಮುಂತಾದ ತೊಂದರೆಗಳಿಂದ ಒಟ್ಟು ಜೀವಸಂಕುಲವೇ ತತ್ತರಿಸುವಂತಾಗಿದೆ. ಮಾನವನ ಬುದ್ಧಿವಂತಿಕೆ ಹತ್ತು ಹಲವು ಕ್ಷೇತ್ರಗಳಲ್ಲಿ ಅಪ್ರತಿಮವಾಗಿ ಮುನ್ನಡೆದಿವೆ, ನಿಜ. ಆದರೆ ತಾನಿರುವ ಪ್ರಪಂಚವನ್ನು ಅವನು ಹೇಗೆ ಅರ್ಥಮಾಡಿಕೊಂಡಿದ್ದಾನೆ, ತನ್ನ ಜೀವನಕ್ಕೂ ಅದಕ್ಕೂ ಎಂಥ ಸಂಬಂಧವಿರಬೇಕು — ಈ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕು. ಆಗ ಪ್ರಪಂಚದಲ್ಲಿ ಉತ್ತಮ ಬದುಕಿನ ಕಲ್ಪನೆ ಮೂಡಿಬರಬಹುದು.

## ಜಡ ಮತ್ತು ಚೈತನ್ಯ

ಪ್ರಪಂಚದುದ್ದಕ್ಕೂ ನಾವು ಗಮನಿಸುತ್ತೇವೆ, ಅನಂತ ಜಡ ವಸ್ತುಗಳ ರಾಶಿ ಹರಡಿಕೊಂಡಿದೆ. ನೆಲ, ನದಿ, ಪರ್ವತ, ಅರಣ್ಯ, ಸಮುದ್ರ — ಹೀಗೆ ವೈವಿಧ್ಯದಿಂದ ಕೂಡಿದ ಭೂಮಿ; ಆಕಾಶದಲ್ಲಿ ಅನಂತವಾಗಿ ವ್ಯಾಪಿಸಿರುವ ನಕ್ಷತ್ರ, ಗ್ರಹ ಮುಂತಾದವುಗಳು ನಮಗೆ ವಿಸ್ತಾರವಾದ ಪ್ರಪಂಚದ ಭೌಮದರ್ಶನವನ್ನು ಮೂಡಿಸುತ್ತವೆ. ಚಲಿಸದೆ ಬಿದ್ದಿರುವ ಈ ಜಡಪ್ರಪಂಚಕ್ಕಿಂತ ಭಿನ್ನವಾದ ಜೀವ ಜಗತ್ತುಗಳಲ್ಲೂ ಎಷ್ಟೊಂದು ವೈವಿಧ್ಯ! ನೀರಿನಲ್ಲಿ, ನೆಲದಲ್ಲಿ, ಆಕಾಶದಲ್ಲಿ ಚಲಿಸುವ ಸಣ್ಣ-ದೊಡ್ಡ ಸಹಸ್ರಾರು ಜೀವ ಸಂಕುಲಗಳು ಪ್ರಾಣಿ-ಪಕ್ಷಿ-ಜಲಚರಗಳ ರೂಪದಲ್ಲಿ ನಮ್ಮ ಸಹಜೀವಿಗಳೆನಿಸಿವೆ. ಸ್ಪಷ್ಟವಾಗಿ ಈ ವ್ಯತ್ಯಾಸ ನಮಗೆ ಗೋಚರವಾಗುತ್ತದೆ: ಜಡಜಗತ್ತಿಗಿಂತ ಸಂಪೂರ್ಣ ಭಿನ್ನವಾದದ್ದು ಚೈತನ್ಯದಿಂದ ಕೂಡಿದ ಜೀವಿಗಳು. ಸ್ವತಂತ್ರವಾಗಿ ಚಲಿಸುವ, ವರ್ತಿಸುವ, ಕ್ರಿಯೆಯಲ್ಲಿ ತೊಡಗುವ ಜೀವಿಗಳು ಜಡಪ್ರಪಂಚಕ್ಕಿಂತ ಎಷ್ಟೋ ಪಾಲು ಉನ್ನತ ದರ್ಜೆಯವು. ಕೇವಲ ಸಾಮಾನ್ಯ ದೃಷ್ಟಿಗೇ ಇದು ಗೋಚರವಾಗುತ್ತದೆ. ಇನ್ನು ಉನ್ನತ ಹಂತಕ್ಕೇರಿ, ಆಳವಾಗಿ ಆಲೋಚಿಸಿದಂತೆಲ್ಲ ಜೀವಜಗತ್ತಿನ ಮಹಿಮೆ ಮತ್ತಷ್ಟು ಸ್ಪಷ್ಟವಾಗಿ, ಆಶ್ಚರ್ಯಕರವೆಂಬಂತೆ ನಮಗೆ ಕಂಡುಬರುತ್ತದೆ.

ಭೌತಿಕ ವಿಜ್ಞಾನವು ಜಡಪ್ರಪಂಚವನ್ನು ಹಲವು ಬಗೆಯಲ್ಲಿ ಅಧ್ಯಯನ ಮಾಡಿ ಭೌತಶಾಸ್ತ್ರ, ರಸಾಯನ ಶಾಸ್ತ್ರಗಳೆಂಬ ದೊಡ್ಡ ವಿಜ್ಞಾನ ಶಾಸ್ತ್ರಗಳನ್ನೇ ರಚಿಸಿದೆ. ಅದೇ ರೀತಿ ಜೀವಶಾಸ್ತ್ರ, ಮಾನವ ಶಾಸ್ತ್ರಗಳೂ ವಿಸ್ತಾರವಾಗಿ ಬೆಳೆದಿವೆ. ಹೀಗಿದ್ದೂ, ಜಡ-ಚೈತನ್ಯಗಳಿಂದ ಕೂಡಿದ ಈ ಜಗತ್ತಿನ ಕೆಲವು ಮೂಲಭೂತ ರಹಸ್ಯಗಳನ್ನು ಭೇದಿಸಲು ವಿಜ್ಞಾನಕ್ಕೆ ಇನ್ನೂ ಸಾಧ್ಯವಾಗಿಲ್ಲ. ಉದಾಹರಣೆಗೆ, ಈ ಪ್ರಪಂಚ ಎಲ್ಲಿಂದ ಬಂತು? ಈ ಸೃಷ್ಟಿಯ ಉದ್ದೇಶವೇನು? ಜೀವಿಗಳಲ್ಲಿ ಕಂಡುಬರುವ ಹುಟ್ಟು-ಸಾವುಗಳ ಅರ್ಥವೇನು? ಇಂದ್ರಿಯಗಳಿಗೆ ಗೋಚರವಾಗುವ ಭೌತಿಕ ಜಗತ್ತಿನಾಚೆಗೆ ಏನಿದೆ? ತತ್ತ್ವಶಾಸ್ತ್ರ ಹಾಗೂ ಆಧ್ಯಾತ್ಮಿಕ ತತ್ತ್ವಗಳು ಇಂಥ ಮೂಲಭೂತ ಪ್ರಶ್ನೆಗಳನ್ನು ಕುರಿತಂತೆ ತಮ್ಮದೇ ಆದ ಸಿದ್ಧಾಂತಗಳನ್ನು ರೂಪಿಸಿವೆ. ಆದರೆ ವೈಜ್ಞಾನಿಕ ರೀತಿಯಲ್ಲಿ ಚಿಂತಿಸುವ ಆಧುನಿಕ ಮಾನ

ವನು ಭೌತಿಕ ಅಥವಾ ಇಂದ್ರಿಯಗೋಚರ ಜಗತ್ತನ್ನು ಮೀರಿದ ತತ್ತ್ವ-ಚಿಂತನೆಗಳನ್ನು ಗಂಭೀರವಾಗಿ ಪರಿಗಣಿಸುವುದೇ ಇಲ್ಲ. ಇದೇ ಅವನ ಮಿತಿ: ಇದರಿಂದ ಹಲವು ಉನ್ನತ ವಿಚಾರಗಳಿಂದ ಅವನು ವಂಚಿತನಾಗಿದ್ದಾನೆ.

## ಪ್ರಪಂಚದ ರಚನೆ

ವೇದಾಂತ ಹೇಳುವ ಪ್ರಕಾರ ಪ್ರಪಂಚವೆಲ್ಲ ಪಂಚಭೂತಗಳಿಂದ ನಿರ್ಮಾಣಗೊಂಡಿವೆ. ಭೂಮಿ, ನೀರು ಗಾಳಿ, ವಾಯು, ಆಕಾಶ — ಇವುಗಳ ಮೂಲಸ್ವರೂಪ ಇಂದ್ರಿಯಗಳಿಗೆ ನಿಲುಕದೆ ಸೂಕ್ಷ್ಮವಾಗಿವೆ; ಇವು ಒಂದರಲ್ಲೊಂದು ವಿವಿಧ ಬಗೆಯಲ್ಲಿ ಸಂಯೋಜನೆಯನ್ನು ಹೊಂದಿ, ಭೌತಿಕ ವಸ್ತುಗಳಾಗಿವೆ. ರಸಾಯನ ಶಾಸ್ತ್ರದಲ್ಲಿ ಬರುವ ಮೂಲವಸ್ತುಗಳ ಬಗೆಬಗೆಯ ಸಂಯೋಜನೆಗಳು ಕೂಡ ಇದೇ ರೀತಿಯ ಪ್ರಕ್ರಿಯೆಯಾಗಿದೆ. ಪಂಚಭೂತಗಳಿಂದ ಅಸ್ತಿತ್ವಕ್ಕೆ ಬಂದ ಜಡಜಗತ್ತು ನಿರಂತರ ಬದಲಾಗುತ್ತಿದೆ; ಪ್ರತಿಯೊಂದು ಕಣಕಣವೂ ಬದಲಾಗುತ್ತಿವೆ. ವಿವಿಧ ಸಂಯೋಜನೆಗಳಿಂದ, ಹಲವು ಆಕಾರ-ಬಣ್ಣಗಳಿಂದ ಗೋಚರವಾಗುವ ಪ್ರಪಂಚ ಪ್ರತಿ ಕ್ಷಣವೂ ಬದಲಾಗುವುದಿದ್ದರೂ, ಅವೆಲ್ಲ ಶಾಶ್ವತವಾಗಿ ಇರುವಂತೆ ಕಂಡುಬರುವುದಲ್ಲ? ಅದೇಕೆ? ಸಾವಿರಾರು ವರ್ಷಗಳಿಂದ ಇದೇ ಪರ್ವತ, ನದಿ, ಸಾಗರಗಳು ಇದ್ದಿರಲಿಲ್ಲವೆ? ಆದರೆ ಸೂಕ್ಷ್ಮವಾಗಿ ಗಮನಿಸಿದರೆ, ಈ ಯಾವ ಸಂಗತಿಗಳೂ ಹಿಂದೆ ಇದ್ದಂತೆ ಇಂದು ಇಲ್ಲ ಎಂದು ಅರ್ಥವಾಗುವುದು. ಅದೇ ರೀತಿ ಪ್ರತಿಯೊಂದು ವಸ್ತುವೂ ಬದಲಾಗುವುದು. ಬದಲಾವಣೆ ಎಂದರೆ ನಾಶವೆಂದೇ ಅರ್ಥ. ಒಂದು ವಸ್ತು ನಾಶವಾಗುವುದೆಂದರೆ, ಅದು ಎಂದೋ ಒಂದು ಸಮಯದಲ್ಲಿ ಅಸ್ತಿತ್ವಕ್ಕೆ ಬಂದಿರಲೇಬೇಕು. ಅಂದರೆ ಹಿಂದೆ ಇರಲಿಲ್ಲ ಎಂದರ್ಥ. ಈ ತರ್ಕಕ್ಕನುಗುಣವಾಗಿ, ಬದಲಾಗುವ ಯಾವ ವಸ್ತುವೂ ಶಾಶ್ವತವಲ್ಲ; ಸೃಷ್ಟಿ-ಸ್ಥಿತಿ-ಲಯಗಳ ಚಕ್ರಕ್ಕೆ ಪ್ರಪಂಚದ ಪ್ರತಿಯೊಂದು ವಸ್ತುವೂ ಒಳಗಾಗಿದೆ; ಆದ್ದರಿಂದ ಬದಲಾಗುತ್ತಿರುವುದೇ ಜಗತ್ತಿನ ಸ್ವಭಾವ. ('ಜಗತ್' ಎಂಬ ಶಬ್ದದ ಅರ್ಥವೇ 'ಚಲಿಸು' ಎಂದಾಗಿದೆ.)

## ಜೀವ, ಚೈತನ್ಯ

ಜಡವಸ್ತುಗಿಂತ ಭಿನ್ನವಾದುದು ಜೀವಸಂಕುಲದ ಚೈತನ್ಯದ ಸ್ವಭಾವ. ಚೈತನ್ಯವು ಅನೇಕ ಜಡವಸ್ತುಗಳ ಸಂಯೋಗವಾದ ದೇಹದ ಜೊತೆಗೆ ಸೇರಿಕೊಂಡು 'ಜೀವಿ'ಯೆನಿಸುವುದು. ದೇಹ ಮತ್ತು ಜೀವ ಎರಡೂ ಸೇರಿಕೊಂಡಿದ್ದರೆ ಮಾತ್ರ ಅದು 'ಜೀವಂತ' ವಾಗಿದೆ ಎನ್ನುತ್ತೇವೆ. ಯಾವಾಗ ಜೀವವು ದೇಹವನ್ನು ಬಿಟ್ಟು ತೊಲಗಿಹೋಗುವುದೋ, ಆಗ ದೇಹ ಕೇವಲ ಜಡ; ಅದು ಚೈತನ್ಯವಲ್ಲ. ಅದು ಕೊಳೆತು ಪಂಚಭೂತಗಳಲ್ಲಿ ಲೀನವಾಗಿ ಹೋಗುವುದು. ದೇಹ ಮತ್ತು ಜೀವ ಇವೆರಡನ್ನೂ ಬಂಧಿಸಿರುವ ಶಕ್ತಿ ಯಾವುದು? ಒಂದು ಜೀವಿ ಜನ್ಮ ತಳೆದಾಗ ವ್ಯಕ್ತವಾಗುವ ಚೈತನ್ಯವು, ಅದೇ ಜೀವಿ ಸತ್ತುಹೋದಾಗ ಎಲ್ಲಿಗೆ ಹೋಗುವುದು?

ಜೀವಿಗಳ ಅಸ್ತಿತ್ವವನ್ನು ಕುರಿತಾದ ಮೂಲಭೂತವಾದ ಪ್ರಶ್ನೆಯಿದು. ಅತ್ಯಂತ ಪ್ರಾಚೀನ ಕಾಲದಲ್ಲೇ ಭಾರತೀಯ ಋಷಿಮುನಿಗಳನ್ನು ಕಾಡಿದ ಈ ಪ್ರಶ್ನೆಗೆ ಉತ್ತರವೂ ದೊರಕಿತು: ಜನನ, ಮರಣಗಳಿಂದ ಕೂಡಿದ ಈ ಜೀವನ ಕೇವಲ ಒಂದು ಹಂತ ಅಷ್ಟೇ; ಈ ಬದುಕು ಮುಗಿದ ನಂತರ ಜೀವವು ಇನ್ನೊಂದು ದೇಹವನ್ನು ಪಡೆಯುವುದು; ಅಲ್ಲಿ ತನ್ನ ಬಯಕೆಗಳನ್ನು ಪೂರೈಸುತ್ತ ನಾನಾ ಅನುಭವಗಳನ್ನು ಪಡೆದು ತನ್ನ ಮತ್ತೊಂದು ಜನ್ಮವನ್ನು ಪೂರೈಸುವುದು. ಮುಂದೆ ಇನ್ನೊಂದು ಜನ್ಮ, ಅದಾದ ಮೇಲೆ ಇನ್ನೊಂದು — ಹೀಗೆ ಹಲವು ಜನ್ಮಜನ್ಮಾಂತರಗಳ ಬದುಕನ್ನು ಬದುಕುತ್ತ ಜೀವಿಯು ಪ್ರಯಾಣ ಮಾಡುವುದು. ಹೀಗೆ ಹಲವು ಜನ್ಮಗಳ ಪ್ರಯಾಣವೆಂದರೆ ಅದೊಂದು ಬಂಧನ; ಅದರಿಂದ ಬಿಡುಗಡೆಯೇ 'ಮುಕ್ತಿ' ಅಥವಾ ಸಾಕ್ಷಾತ್ಕಾರ. ಯಾವಾಗ ಜೀವಿ ಈ ಪ್ರಯಾಣವನ್ನು ಕೊನೆಗೊಳಿಸುವುದೋ ಆಗಲೇ ಮುಕ್ತಿ. ಆದರೆ ಜೀವಿಗೆ ತಾನೇತಾನಾಗಿ ಈ ಮುಕ್ತಿ ದೊರಕದು; ಜನ್ಮಜನ್ಮಾಂತರಗಳ ಜೀವನದ ನಡುವೆ ಎಲ್ಲೋ ಅರಿವು ಮೂಡುವುದು, ಈ ಪ್ರಯಾಣ ಸಾಕು ಎನ್ನಿಸಿ, ಶಾಶ್ವತ ಸತ್ಯವನ್ನು ಕಾಣಬೇಕು ಎಂಬ ಬಯಕೆ ಮೂಡುವುದು. ನಮ್ಮ ಪರಂಪರೆಯ ಪ್ರಕಾರ ದೇವರ ಕೃಪೆಯಿಂದಲೋ, ಯಾವುದೋ ದುಃಖ-ಗಂಡಾಂತರದಿಂದಲೋ ಜೀವಿಗೆ ಸತ್ಯವನ್ನು ಕಾಣುವ, ಶಾಶ್ವತ ಸುಖವನ್ನು ಕಂಡುಕೊಳ್ಳುವ ಬಯಕೆ ಉಂಟಾಗುವುದು. ಆಗ ಆ ವ್ಯಕ್ತಿ ಯೋಗ್ಯ ಗುರುವನ್ನು ಹುಡುಕುತ್ತ ಹೋಗಿ, ಗುರುವಿನ ಮಾರ್ಗದರ್ಶನದಂತೆ ಸಾಧನೆ ಮಾಡುವನು. ಆಗ ಅವನಿಗೆ ಸರಿಯಾದ ಮಾರ್ಗ ಕಾಣಿಸಿಕೊಂಡು, ಸತ್ಯದ ದಾರಿ ಗೋಚರಿಸುವುದು. ಕಾಲಕ್ರಮದಲ್ಲಿ ಅವನು ಮುಕ್ತನಾಗುವನು.

ಸ್ವತಂತ್ರವಾಗಿ ಚಿಂತಿಸಬಲ್ಲ, ಅರಿತುಕೊಳ್ಳಬಲ್ಲ, ಭಾವಿಸಬಲ್ಲ ಶಕ್ತಿ ಮಾನವನಿಗಷ್ಟೇ ಇದೆ; ಆದ್ದರಿಂದ ಜೀವಗಳಲ್ಲೆಲ್ಲ ಅವನೇ ಅತಿ ಶ್ರೇಷ್ಠ. ಅದಕ್ಕಿಂತಲೂ ಹೆಚ್ಚಾಗಿ, ಮುಕ್ತಿಗಾಗಿ ಪ್ರಯತ್ನಿಸುವ, ಅದನ್ನು ಹೊಂದುವ ಸಾಮರ್ಥ್ಯ ಮಾನವನಿಗಷ್ಟೇ ಇದೆ — ಆದ್ದರಿಂದಲೇ ಮಾನವ ಜನ್ಮ ಅತ್ಯಂತ ಶ್ರೇಷ್ಠ ಎನ್ನಲಾಗಿದೆ.

## ಪ್ರಪಂಚ ಮತ್ತು ಭಗವಂತ

ಮೇಲಿನ ಈ ದೃಷ್ಟಿಕೋನದೊಂದಿಗೆ ನಾವು ಪ್ರಪಂಚವನ್ನು ನೋಡಬೇಕು. ಜೀವಿಯು ಜಡ ಪ್ರಪಂಚದ ನಾನಾ ವಸ್ತುಗಳನ್ನು ಬಳಸಿಕೊಂಡು ಜೀವನವನ್ನು ನಡೆಸುವುದು. ಯೋಗ್ಯ ಪರಿಸರವಿದ್ದಲ್ಲಿ ಮಾತ್ರ ಜೀವಿಗಳು ಬದುಕಬಲ್ಲವು; ಆದ್ದರಿಂದ ಜೀವಿಗಳ ಬದುಕಿಗಾಗಿಯೇ ಭೂಮಿ ಇದೆ ಎನ್ನಬಹುದೆ? ಅದೇ ರೀತಿ, ಸಮಸ್ತ ಜಡವಸ್ತುಗಳು ಚೈತನ್ಯದ ಸ್ಪರ್ಶದಿಂದ ಮಾತ್ರವೇ ನಾನಾ ಬಗೆಯ ಅನುಭವಗಳಾಗಿ ಅರಿಯಲ್ಪಡುವುವು. ಆದ್ದರಿಂದ ಜಡವಸ್ತುಗಳು ಚೈತನ್ಯಕ್ಕಾಗಿಯೇ ಇವೆ ಎನ್ನಬಹುದೆ? ವೇದಾಂತದ ಪ್ರಕಾರ ಒಂದೆಡೆ ಜೀವಿಗಳ ಸೃಷ್ಟಿ, ಇನ್ನೊಂದೆಡೆ ಜಡಜಗತ್ತಿನ ಸೃಷ್ಟಿ ಪರಮಾತ್ಮನಿಂದಲೇ ಉಂಟಾಗುವುದು; ಏಕಕಾಲದಲ್ಲೇ

ಉಂಟಾಗುವುದು. ಜಡ, ಚೈತನ್ಯ ಎರಡೂ ಬಗೆಯ ವಸ್ತುಗಳಿಂದ ಕೂಡಿದ ಇಡೀ ಪ್ರಪಂಚವನ್ನು ಪರಮಾತ್ಮನು ಹಾಸು-ಹೊಕ್ಕಾಗಿ ವ್ಯಾಪಿಸಿಕೊಂಡಿದ್ದಾನೆ. ಆದ್ದರಿಂದ ಅವನನ್ನು ಸಮಸ್ತ ಚರಾಚರ ಜಗತ್ತಿನ ಅಂತರ್ಯಾಮಿ ಎನ್ನಲಾಗಿದೆ. ಹಾಗಿದ್ದರೂ ಈ ಸೃಷ್ಟಿ, ಈ ಜಗತ್ತು ಅವನ ಲೀಲೆ; ಜೀವಿಗಳನ್ನು ನಾನಾ ದೃಶ್ಯಗಳ ಮೂಲಕ ಮರುಳುಗೊಳಿಸಿ, ಜನನ-ಮರಣಗಳ ಚಕ್ರದಲ್ಲಿ ನಿರಂತರ ಸುತ್ತಾಡಿಸುತ್ತಿರುವ ಮಾಯಾಜಾಲವಿದು. ಜ್ಞಾನಿಗಳು, ಸಂತರು ಮಾತ್ರವೇ ಪ್ರಪಂಚದ ಬಂಧನವನ್ನು ಕತ್ತರಿಸಿ ಹೊರ ಬರುತ್ತಾರೆ; ಸತ್ಯವನ್ನು ಕಾಣುತ್ತಾರೆ.

### ಪರಮಾರ್ಥ

ಪ್ರಪಂಚದ ಸುಖ, ದುಃಖಗಳಿಂದ ಬೇಸತ್ತು ಶಾಶ್ವತವಾದುದನ್ನು ಬಯಸಿ, ಪ್ರಪಂಚದ ಬಂಧನವನ್ನು ಕಿತ್ತೊಗೆಯಲು ಬಯಸುವ ವ್ಯಕ್ತಿಗೆ 'ಮುಮುಕ್ಷು' (ಅಂದರೆ 'ಮುಕ್ತಿಯನ್ನು ಬಯಸುವವನು' ಎಂದರ್ಥ) ಎನ್ನುತ್ತಾರೆ. ಅವನಿಗೆ ಪ್ರಪಂಚ ಅನಿತ್ಯವೆಂದೂ ಇಲ್ಲಿನ ವಸ್ತುಗಳ ಸುಖಗಳು ಕ್ಷಣಿಕವೆಂದೂ ತಿಳಿದಿದೆ. ತನ್ನ ಬದುಕು ಅಲ್ಪಕಾಲಿಕವೆಂದು ಅವನು ಅರಿತಿದ್ದಾನೆ. ಹೀಗೆ ಅರಿತು, ಸತ್ಯವನ್ನು ಕಾಣುವ ಹಂಬಲದಿಂದ ಗುರುವನ್ನು ಸಮೀಪಿಸುತ್ತಾನೆ. ಗುರುವಾದವನು ಈಗಾಗಲೇ ಸತ್ಯವನ್ನು ಕಂಡವನು; ಆದರದಿಂದ ಶಿಷ್ಯನನ್ನು ಸ್ವೀಕರಿಸಿ, ಅವನಿಗೆ ಸತ್ಯದ ದಾರಿಯನ್ನು ತೋರಿಸಿಕೊಡುತ್ತಾನೆ.

ಹೀಗೆ ವೇದಾಂತದಲ್ಲಿ ಮೋಕ್ಷವನ್ನು ಹೊಂದುವುದು ಒಂದು ಶ್ರೇಷ್ಠ ಆದರ್ಶವಾಗಿದೆ. ಪ್ರಪಂಚವನ್ನು ಮೀರಿ ಹೋಗುವ, ಇದರ ಬಂಧನವನ್ನು ಕಿತ್ತೊಗೆಯುವ ಬಯಕೆಯಾದರೂ ಏಕೆ? ಇದರಾಚೆಗೆ ಇರುವ ಸತ್ಯ ಅಂತಿಂತಹುದಲ್ಲ. ಆದಿಯೂ ಇಲ್ಲದ, ಅಂತ್ಯವೂ ಇಲ್ಲದ ಶಾಶ್ವತ ಸತ್ಯವದು. ಅದನ್ನು ಕಂಡವನ ಎಲ್ಲ ಬಯಕೆಗಳೂ ಪೂರ್ಣಗೊಳ್ಳುವವು; ಅವನು ಆ ಸತ್ಯದಲ್ಲೇ ಒಂದಾಗುವನು. ಅದು ಅತ್ಯಂತ ಜಡವಲ್ಲವೆ? ಉಪನಿಷತ್ತುಗಳು ಹೇಳುತ್ತವೆ, ಅದು ಆನಂದದ ಗಣಿ, ಕೊನೆ ಮೊದಲಿಲ್ಲದ ಆನಂದವದು. ಅಲ್ಲಿ ಜನನ-ಮರಣ, ಸುಖ-ದುಃಖವೇ ಮೊದಲಾದ ದ್ವಂದ್ವಗಳಿಲ್ಲ, ಯಾವುದೇ ಸಂಕಟ, ಸಮಸ್ಯೆಗಳಿಲ್ಲ. ಎಲ್ಲ ಮಿತಿಯನ್ನೂ ಮೀರಿದ, ಅನಂತವೂ, ನಿತ್ಯವೂ, ಶುದ್ಧವೂ ಆದ, ಎಲ್ಲ ಅರಿವಿನ ಆಗರವೂ ಆದ ಆ ಸತ್ಯವನ್ನು ಉಪನಿಷತ್ತು ಹೀಗೆ ವರ್ಣಿಸುತ್ತದೆ:

> **ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ**
> **ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।**
> **ತಮೇವ ಭಾಂತಮನುಭಾತಿ ಸರ್ವಂ**
> **ತಸ್ಯ ಭಾಸಾ ಸರ್ವಮಿದಂ ವಿಭಾತಿ ॥**

*(ಕಠೋಪನಿಷತ್ತು, ೨.೨.೧೫)*

(ಅಲ್ಲಿ ಸೂರ್ಯನಿಲ್ಲ, ಚಂದ್ರನಿಲ್ಲ, ನಕ್ಷತ್ರಗಳಿಲ್ಲ, ಮಿಂಚುಗಳಿಲ್ಲ. ಇನ್ನು ಅಗ್ನಿಯು ಪ್ರಕಾಶಿಸುವುದೆಲ್ಲಿ? ಬೆಳಗುತ್ತಿರುವ ಅವನನ್ನೇ ಅನುಸರಿಸಿ ಎಲ್ಲವೂ ಬೆಳಗುತ್ತಿರುವುವು. ಅವನ ಪ್ರಕಾಶದಿಂದಲೇ ಪ್ರತಿಯೊಂದೂ ಬೆಳಗುತ್ತಿವೆ.) ಈ ಪ್ರಪಂಚವನ್ನು ಮೀರಿದ ಸತ್ಯವನ್ನು ಕಂಡ ಮಹಾತ್ಮರ ಉಪದೇಶಗಳೇ ಎಲ್ಲರಿಗೂ ದಾರಿದೀಪ; ಅವುಗಳೇ ಎಲ್ಲರ ಆದರ್ಶ.

### ಪ್ರಪಂಚ ಮತ್ತು ಪ್ರಾಪಂಚಿಕತೆ

'ನೀನು ಪ್ರಪಂಚದಲ್ಲಿರು, ಆದರೆ ನಿನ್ನಲ್ಲಿ ಪ್ರಾಪಂಚಿಕತೆ ಇಲ್ಲದಿರಲಿ' ಎಂಬುದು ಶ್ರೀರಾಮಕೃಷ್ಣರ ವಾಣಿ. ಹುಟ್ಟಿದ ಪ್ರತಿಯೊಂದು ಜೀವಿಯೂ ಇಲ್ಲಿ ಬದುಕಿರುವವರೆಗೆ ಈ ಪ್ರಪಂಚವನ್ನು ಆಶ್ರಯಿಸಿಕೊಂಡು ಇರಬೇಕಾದುದು ಅನಿವಾರ್ಯ. ಆದರೆ ಈ ಪ್ರಪಂಚಕ್ಕೇ ಅಂಟಿಕೊಂಡಿದ್ದರೆ, ಕೊನೆಗೊಮ್ಮೆ ಇದನ್ನು ಅಗಲಿ ಹೋಗಲೇಬೇಕಾಗಿ ಬಂದಾಗ, ಅಂದರೆ ಮೃತ್ಯು ಸಮೀಪಿಸಿದಾಗ, ಅವನಿಗೆ ಅತಿಹೆಚ್ಚಿನ ದುಃಖವುಂಟಾಗುವುದು. ಇನ್ನೇನು ಸಾಯುವ ಗಳಿಗೆ ಬಂದಾಗಲೂ ಅವನು 'ಅಯ್ಯೋ, ದೀಪದ ಬೆಳಕು ಸಣ್ಣದು ಮಾಡು, ಎಣ್ಣೆ ಹೆಚ್ಚು ಖರ್ಚಾದೀತು' ಎಂದು ತನ್ನ ಜಿಪುಣಬುದ್ಧಿಯನ್ನು ಬಿಡಲಾರ. ಜೀವನವೆಲ್ಲ ಹಣ ಕೂಡಿಡುವುದಕ್ಕಾಗಿಯೇ ತನ್ನ ಚೈತನ್ಯವನ್ನು ವಿನಿಯೋಗಿಸಿದರೆ, ಅಂತಹ ವ್ಯಕ್ತಿ ಕೊನೆಯ ಗಳಿಗೆ ಬಂದಾಗಲೂ ಹಣದ ಚಿಂತನೆ ಬಿಟ್ಟರೆ ಬೇರೇನು ಮಾಡಬಲ್ಲ? ಆದರೆ ಒಂದು ಚಿಕ್ಕಾಸು ಕೂಡ ಈ ಪ್ರಪಂಚವನ್ನು ಬಿಟ್ಟು ಅವನೊಂದಿಗೆ ಹೋಗಲಾರದು. ತಾನು ಕೂಡಿಟ್ಟ ಸೊತ್ತು, ಬದುಕು, ಭಾಗ್ಯ, ಕುಟುಂಬ, ಜಮೀನು ಎಲ್ಲವನ್ನೂ ಬಿಟ್ಟು ಹೋಗಬೇಕಾದವನ ದುಃಖ ಸಾಮಾನ್ಯವಾದುದಲ್ಲ. ಈ ಕಾರಣದಿಂದಲೇ ಪ್ರಪಂಚದ ನಶ್ವರತೆಯನ್ನೂ, ಅದು ನಮ್ಮನ್ನು ಮರುಳುಗೊಳಿಸುವ ಬಗೆಯನ್ನೂ ಯಾವಾಗಲೂ ಚಿಂತಿಸಬೇಕೆಂದು ವೇದಾಂತ ಹೇಳುತ್ತದೆ. ಶಾಶ್ವತವಲ್ಲದ ಪ್ರಪಂಚದಲ್ಲಿ ಅತಿಥಿಯಂತೆ ಇರುವವನು ಈ ಪ್ರಪಂಚವನ್ನು ಬಿಡುವಾಗ ದುಃಖಿಸುವುದಿಲ್ಲ; ತನ್ನ ನಿಜವಾದ ಮನೆಗೆ ಮರಳುವ ಅತಿಥಿಯಂತೆ ಸಾವಿಗೆ ಸಿದ್ಧನಾಗುತ್ತಾನೆ. ಈ ಪ್ರಪಂಚವನ್ನು ಮೀರಿದ ಶಾಶ್ವತ ಸತ್ಯವನ್ನು ಹೊಂದುವ ಬಯಕೆ ಹೊತ್ತವನು ಅಂತ್ಯಕಾಲದಲ್ಲಿ ಅಂತಹ 'ಸತ್ಯಸ್ಯ ಸತ್ಯ'ವಾದ ಪರಮಾತ್ಮನನ್ನೇ ಚಿಂತಿಸುತ್ತಾನೆ. ಗೀತೆ ಹೇಳುತ್ತದೆ, 'ಮರಣಕಾಲದಲ್ಲಿ ನನ್ನನ್ನೇ ಸ್ಮರಿಸುತ್ತಾ ದೇಹವನ್ನು ಬಿಡುವವನು ನನ್ನ ಭಾವವನ್ನೇ ಹೊಂದುವನು; ಇದರಲ್ಲಿ ಸಂಶಯವಿಲ್ಲ' ಎಂದು. ಇದು ಪ್ರಾಪಂಚಿಕತೆಯನ್ನು ಮೀರಿ ಹೋಗುವ ಬಗೆ. 

**ಏಪ್ರಿಲ್ ತಿಂಗಳ ಕಾರ್ಯಕ್ರಮಗಳು**

| | | |
|---|---|---|
| ೧೧ | ಬುಧವಾರ | ಏಕಾದಶಿ |
| ೧೮ | ಬುಧವಾರ | ಶ್ರೀ ಬಸವ ಜಯಂತಿ |
| ೨೦ | ಶುಕ್ರವಾರ | ಶ್ರೀ ಶಂಕರ ಜಯಂತಿ |
| ೨೧ | ಶನಿವಾರ | ಶ್ರೀ ರಾಮಾನುಜ ಜಯಂತಿ |
| ೨೬ | ಗುರುವಾರ | ಏಕಾದಶಿ |
| ೨೯ | ಭಾನುವಾರ | ಬುದ್ಧಪೂರ್ಣಿಮಾ |

# ನಿವೃತ್ತಿಮಾರ್ಗ



❁ ಮನಸ್ಸಿನಲ್ಲಿ ನಿವೃತ್ತಿಯುಂಟಾಯಿತು ಎಂದರೆ, ವಿವೇಕ ಉದಯವಾಗುತ್ತದೆ. ವಿವೇಕ ಉದಯವಾಯಿತು ಎಂದರೆ, ತಾತ್ತ್ವಿಕ ಭಾವನೆ ಮನಸ್ಸಿನಲ್ಲಿ ಮೂಡುತ್ತದೆ. ಬಳಿಕ ಮನಸ್ಸು ಇಚ್ಛೆಪಡುತ್ತದೆ, 'ಶ್ರೀ ಕಾಳೀ ಸುರತರುವಿರುವೆಡೆಗೆ' ಹೋಗಲು. ಆ ಮರದ ಹತ್ತಿರಕ್ಕೆ ಹೋದರೆ, ಎಂದರೆ ಭಗವಂತನನ್ನು ಸಮೀಪಿಸಿದರೆ ಅನಾಯಾಸವಾಗಿ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಫಲಗಳು ದೊರೆಯುತ್ತವೆ. ಹೌದು, ಆತನ ಸಾಕ್ಷಾತ್ಕಾರವನ್ನು ಪಡೆದುಕೊಂಡ ಮೇಲೆ ಇಚ್ಛೆಯಿದ್ದರೆ ಸಂಸಾರಿಗಳಿಗೆ ಬೇಕಾದ ಧರ್ಮ, ಅರ್ಥ, ಕಾಮಗಳನ್ನು ಆತನಿಂದ ಪಡೆದುಕೊಳ್ಳಬಹುದು.

❁ ಭಗವಂತನ ಸಾಕ್ಷಾತ್ಕಾರ ದೊರೆಯದವರೆಗೆ 'ನೇತಿ, ನೇತಿ' ಮಾರ್ಗವನ್ನು ಅನುಸರಿಸಿ ಈ ಜಗತ್ತನ್ನು ತ್ಯಜಿಸಬೇಕು. ಆದರೆ ಯಾರು ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಂಡಿದ್ದಾರೊ ಅವರಿಗೆ ಗೊತ್ತಿದೆ ಆತನೇ ಎಲ್ಲವೂ ಆಗಿದ್ದಾನೆ ಎಂಬುದು. ಆಗ ಬೋಧೆಯಾಗುತ್ತದೆ. 'ಈಶ್ವರ-ಮಾಯಾ-ಜೀವ-ಜಗತ್' ಎಂಬುದಾಗಿ. ಜೀವಜಗತ್ತೆಲ್ಲವೂ ಕೇವಲ ಆತನೇ.

❁ ಭಗವಂತನೊಬ್ಬನೇ ಸತ್, ಉಳಿದುದೆಲ್ಲಾ ಅಸತ್ ಎಂಬ ವಿಚಾರ. ಸತ್ ಎಂದರೆ ನಿತ್ಯವಾದದ್ದು, ಅಸತ್ ಎಂದರೆ ಅನಿತ್ಯವಾದದ್ದು. ಯಾರು ವಿವೇಕವನ್ನು ಗಳಿಸಿಕೊಂಡಿದ್ದಾರೊ ಅವರಿಗೆ ಗೊತ್ತಿದೆ ಭಗವಂತನೊಬ್ಬನೇ ವಸ್ತು ಉಳಿದುದೆಲ್ಲಾ ಅವಸ್ತು ಎಂದು. ವಿವೇಕ ಉದಯವಾಯಿತು ಎಂದರೆ, ಭಗವಂತನನ್ನು ಅರಿಯಬೇಕು ಎಂಬ ಇಚ್ಛೆಯಾಗುತ್ತದೆ. ಅಸತ್ ವಸ್ತುಗಳನ್ನು ಎಂದರೆ ದೇಹಸುಖ, ಲೋಕ ಮಾನ್ಯತೆ, ಹಣ ಇವೇ ಮೊದಲಾದುವುಗಳನ್ನು ಪ್ರೀತಿಸಿದರೆ, ಸತ್ಸ್ವರೂಪನಾದ ಭಗವಂತನನ್ನು ಅರಿಯಲು ಇಚ್ಛೆಯುಂಟಾಗುವುದಿಲ್ಲ. ಸದ್ವಿಚಾರ ಬಂದ ಮೇಲೇನೆ ಭಗವಂತನನ್ನು ಅರಿಯಲು ಇಚ್ಛೆಯುಂಟಾಗುತ್ತದೆ.

❁ ಯಾರ ಮನಸ್ಸು, ಪ್ರಾಣ, ಅಂತರಾತ್ಮ ಭಗವದ್ಗತವಾಗಿದೆಯೊ ಆತನೇ ಸಾಧು. ಯಾರು ಕಾಮಕಾಂಚನ ತ್ಯಾಗಿಯೊ ಆತನೇ ಸಾಧು. ಯಾರು ಸಾಧುವೋ ಆತ ಹೆಂಗಸರನ್ನು ಎಂದಿಗೂ ಐಹಿಕ ದೃಷ್ಟಿಯಿಂದ ನೋಡುವುದಿಲ್ಲ. ಸರ್ವದಾ ಅವರಿಂದ ದೂರದಲ್ಲೆ ಇರುತ್ತಾನೆ. ಒಂದು ಪಕ್ಷ ಅವರನ್ನು ಸಮೀಪಿಸಬೇಕಾಗಿ ಬಂದರೆ ಅವರನ್ನು ಮಾತೃದೃಷ್ಟಿಯಿಂದ ನೋಡುತ್ತ ಅವರನ್ನು ಪೂಜೆಮಾಡುತ್ತಾನೆ. ಸಾಧು ಯಾವಾಗಲೂ ಭಗವಚ್ಚಿಂತನೆಯನ್ನೇ ಮಾಡುತ್ತಾನೆ. ಭಗವತ್ಸಂಬಂಧವಾಗಿ ಹೊರತು ಬೇರೆ ಯಾವ ಮಾತನ್ನೂ ಆಡುವುದಿಲ್ಲ. ಸರ್ವಭೂತಗಳಲ್ಲಿಯೂ ಭಗವಂತನೇ ಇದ್ದಾನೆ ಎಂಬುದನ್ನು ಅರಿತು ಅವರ ಸೇವೆಯನ್ನು ಮಾಡುತ್ತಾನೆ. ಸಾಮಾನ್ಯವಾಗಿ ಇವು ಸಾಧುವಿನ ಲಕ್ಷಣಗಳು.

❁ ಭಗವಂತನನ್ನು ಇಂದ್ರಿಯಗಳ ಮೂಲಕ ಅಥವಾ ಈ ಮನಸ್ಸಿನ ಮೂಲಕ ಅರಿಯಲಾಗುವುದಿಲ್ಲ. ಆದರೆ ಯಾವ ಮನಸ್ಸಿನಲ್ಲಿ ವಿಷಯರಸ ಎಂಬುದು ಇಲ್ಲವೇ ಇಲ್ಲವೊ ಅಂಥ ಶುದ್ಧ ಮನಸ್ಸಿನಿಂದ ಆತನನ್ನು ಅರಿಯಲು ಸಾಧ್ಯ.

❁ ಸರ್ವದಾ ಕರ್ಮಗಳನ್ನು ಮಾಡಿಕೊಂಡು ಹೋಗುತ್ತಲೇ ಇರಬೇಕಾದ ಆವಶ್ಯಕತೆಯೇನಿರುವುದಿಲ್ಲ. ಕಾಯಿ ಕಚ್ಚಿದ ಮೇಲೆ ಹೂವು ತಾನಾಗಿಯೆ ಉದುರಿ ಹೋಗುವ ಹಾಗೆ, ಭಗವದ್ದರ್ಶನವಾದನಂತರ ಕರ್ಮಗಳು ತಾವಾಗಿಯೇ ನಿಂತು ಹೋಗುತ್ತವೆ.

❁ ಯಾರಿಗೆ ಭಗವಂತನ ಸಾಕ್ಷಾತ್ಕಾರ ದೊರೆತಿದೆಯೋ ಆತನಿಗೆ ಸಂಧ್ಯಾವಂದನಾದಿ ಕರ್ಮಗಳು ಇರುವುದಿಲ್ಲ. ಆತನ ವಿಷಯದಲ್ಲಿ ಸಂಧ್ಯಾವಂದನೆ ಗಾಯತ್ರಿಯಲ್ಲಿ ಲೀನವಾಗುತ್ತದೆ. ಅದು ಹಾಗಾದಾಗ ಗಾಯತ್ರಿಯನ್ನು ಜಪಿಸಿದರೇ ಬೇಕಾದಷ್ಟು. ಬಳಿಕ ಗಾಯತ್ರಿ ಓಂಕಾರದಲ್ಲಿ ಲಯವಾಗುತ್ತದೆ. ಅದಾದನಂತರ ಗಾಯತ್ರಿಯನ್ನು ಜಪಿಸಬೇಕಾದ ಆವಶ್ಯಕತೆಯೇನಿರುವುದಿಲ್ಲ; ಆಗ ಕೇವಲ ''ಓಂ'' ಎಂದು ಜಪಿಸುತ್ತಿದ್ದರೇ ಸಾಕು. ಸಂಧ್ಯಾವಂದನಾದಿ ಕರ್ಮಗಳು ಎಲ್ಲಿಯವರೆಗೆ? ಹರಿನಾಮ ಅಥವಾ ರಾಮನಾಮೋಚ್ಚಾರಣೆಯಿಂದ ಪುಳಕವುಂಟಾಗುವುದಿಲ್ಲವೋ, ಪ್ರೇಮಾಶ್ರು ಸುರಿಯುವುದಿಲ್ಲವೊ ಅಲ್ಲಿಯವರೆಗೆ.

❁ ತೀವ್ರ ವೈರಾಗ್ಯ ಉಂಟಾದರೆ, ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬಹುದು. ಯಾರಿಗೆ ತೀವ್ರ ವೈರಾಗ್ಯ ಉಂಟಾಗಿದೆಯೊ, ಅವರಿಗೆ ಈ ಸಂಸಾರ ದಾವಾನಲದ ಹಾಗೆ ಕಾಣುತ್ತದೆ. ಹೆಂಡತಿ ಮಕ್ಕಳು ಅವರ ಕಣ್ಣಿಗೆ ಆಳವಾದ ಬಾವಿಯ ಹಾಗೆ ಕಾಣುತ್ತಾರೆ. ಅಂಥ ವೈರಾಗ್ಯ ನಿಜವಾಗಿ ಉಂಟಾದುದೇ ಆದರೆ, ಮನೆಯನ್ನು ತ್ಯಜಿಸಿ ಹೋಗಲೇಬೇಕಾಗುತ್ತದೆ. ಸಂಸಾರದಲ್ಲಿ ಕೇವಲ ಅನಾಸಕ್ತರಾಗಿರುವುದು ಅವರಿಗೆ ತೃಪ್ತಿಯನ್ನು ತರದು.

❁ ಯಾರಿಗೆ ಪರಮಹಂಸ ಅಂತ ಹೆಸರು? ಯಾರು ಹಂಸದ ಹಾಗೆ, ಹಾಲು ನೀರು ಒಟ್ಟಿಗೆ ಬೆರೆತಿದ್ದರೂ, ಹಾಲನ್ನು ಮಾತ್ರ ಸ್ವೀಕರಿಸಿ ನೀರನ್ನು ತ್ಯಜಿಸಿಬಿಡುವನೊ; ಇರುವೆಯ ಹಾಗೆ, ಸಕ್ಕರೆ ಮರಳು ಎರಡೂ ಬೆರೆತಿದ್ದರೂ, ಸಕ್ಕರೆಯನ್ನು ಬೇರ್ಪಡಿಸಿಕೊಂಡು ಮರಳನ್ನು ಬಿಟ್ಟು ಬಿಡುವನೊ ಆತನೇ ಪರಮಹಂಸ.

ಶ್ರೀರಾಮಕೃಷ್ಣ ವಚನವೇದದಿಂದ

# ಶ್ರೀಮಾತೆಯವರೊಂದಿಗೆ

ಮೂಲ ಬಂಗಾಳಿ : **ಸ್ವಾಮಿ ಶಾರದೇಶಾನಂದ**

ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

**ಎರಡನೆಯ ಭಾಗ**

ಜಯರಾಮಬಾಟಿಯಲ್ಲಿ ಶ್ರೀಮಾತೆಯವರ ಮನೆಯಲ್ಲಿನ ಊಟವೆಂದರೆ ಮಧ್ಯಮವರ್ಗದ ಕುಟುಂಬದ ಊಟದಂತೆ—ಬೆಳಗಿನ ಹೊತ್ತು ಕಡಲೆಪುರಿ, ಮಧ್ಯಾಹ್ನ ಬಿಳಿ ಅಕ್ಕಿಯ ಅನ್ನ , ಉದ್ದಿನ ದಾಲ್, ಪೊಸ್ತೊ (ಗಸಗಸೆಯಿಂದ ಮಾಡುವ ಪಲ್ಯ), ಖಾರವಾದ ಒಂದು ಬಗೆ ಪಲ್ಯ, ಒಂದು ಬಗೆ ಹುಳಿ; ಒಂದೊಂದು ಸಲ ಸೊಪ್ಪು ತರಕಾರಿ, ನಾನಾ ತರಕಾರಿ ಮಿಶ್ರಣದ ಪಲ್ಯ, ಕರಿದ ಪದಾರ್ಥಗಳು. ಅನೇಕ ಸಲ ಇನ್ನೂ ಏನೇನೋ ಇರುತ್ತಿದ್ದವು. ಸಾಧಾರಣ ಯಾವಾಗಲೂ ಮೀನು ಇರುತ್ತಿತ್ತು. ಮೈಕೈ ಗಟ್ಟಿ ಮುಟ್ಟಾಗಿದ್ದಷ್ಟು ಕಾಲ ಶ್ರೀಮಾತೆ ತಾವೇ ಅಡುಗೆಮಾಡಿ ಬಡಿಸುತ್ತಿದ್ದರು. ಕೊನೆಯಲ್ಲಿ ಅದು ಸಾಧ್ಯವಾಗುತ್ತಿರಲಿಲ್ಲ. ಆದರೆ ಮೊದಲಿನಿಂದ ಕೊನೆಯವರೆಗೂ ಅವರು ಊಟಮಾಡುವಾಗ ಮುಂದುಗಡೆ ಕುಳಿತುಕೊಂಡು ಎಲ್ಲವನ್ನೂ ನೋಡುತ್ತಿದ್ದರು. ಆಸನ, ಎಲೆ, ನೀರು ಎಲ್ಲವನ್ನು ಸರಿಯಾಗಿ ಜೋಡಿಸಿಡಬೇಕು; ಸ್ಥಳ ಅತ್ಯಂತ ಶುದ್ಧವಾಗಿ, ಅಚ್ಚುಕಟ್ಟಾಗಿ ಇರಬೇಕು. ಲೋಟದಲ್ಲಿ ನೀರು ಹೆಚ್ಚು ಕಡಿಮೆ ಆಗಬಾರದು. ಎಲೆಯನ್ನು ಆಸನಕ್ಕೆ ಎದುರಾಗಿ ಮಧ್ಯಭಾಗದಲ್ಲಿ ಹಾಕಬೇಕು. ಆಸನವನ್ನೂ ಹತ್ತಿರ ಹತ್ತಿರವೂ ಹಾಕಬಾರದು, ದೂರದೂರವೂ ಹಾಕಬಾರದು, ಅವುಗಳ ನಡುವೆ ಅಂತರ ಸಮಾನವಾಗಿರಬೇಕು. ಬಡಿಸಲು ಆರಂಭವಾದಾಗ ಶ್ರೀಮಾತೆಯವರ ಮಧುರ ಧ್ವನಿಯಿಂದ ಕೂಡಿದ ಆಹ್ವಾನ ಶಿಷ್ಯಂದಿರ ಕಿವಿಗೆ ಬೀಳುತ್ತಿತ್ತು — ''ಮಗೂ, ಹೊತ್ತಾಯಿತು; ತುಂಬ ತಡವಾಗಿ ಬಿಟ್ಟಿದೆ. ಬೇಗನೆ ಬಂದು ಬಿಡಪ್ಪಾ, ಎಲೆಗೆ ಅನ್ನ ಬಡಿಸಿಯಾಯಿತು, ಬಂದು ಊಟ ಮಾಡಪ್ಪಾ.'' ಮಕ್ಕಳಿಗೆ ತುಸು ತಡವಾಗುತ್ತಿದೆ; ಹಿಡಿದ ಕೆಲಸ ಮುಗಿಸದೆ ಬರಲು ಸಾಧ್ಯವಾಗುತ್ತಿಲ್ಲ. ಶ್ರೀಮಾತೆ ಎಲೆ ಮುಂದೆ ಕುಳಿತು ಸೆರಗಿನಿಂದ ನೊಣವನ್ನು ಓಡಿಸುತ್ತಿದ್ದಾರೆ. ಶಿಷ್ಯಂದಿರು ಊಟ ಮಾಡುತ್ತಿದ್ದಾರೆ — ಶ್ರೀಮಾತೆಯವರ ಮುಖದಲ್ಲಿ, ಕಣ್ಣುಗಳಲ್ಲಿ ಎಂಥ ಗಭೀರ ಆನಂದದ ಬೆಳಕು! ಮಧುರವಾದ ಧ್ವನಿಯಿಂದ ಅವರು ಶಿಷ್ಯಂದಿರನ್ನು ಕೇಳುತ್ತಾರೆ: ''ಹೇಗಾಗಿದೆ?'' ಕೆಲವರ ಎಲೆಯಲ್ಲಿ ಅನ್ನ ಖಾಲಿಯಾಗಿದೆ, ಇನ್ನು ಕೆಲವರ ಎಲೆಯಲ್ಲಿ ದಾಲ್ ಮುಗಿದಿದೆ; ಕೆಲವರು ಕೆಲವೊಂದು ಪದಾರ್ಥಗಳ ರುಚಿ ನೋಡುತ್ತ, ಮಾತುಕತೆಯಾಡುತ್ತ ಹೊಟ್ಟೆತುಂಬ ಊಟ ಮಾಡುತ್ತಿದ್ದಾರೆ.

ಈಗ ತಾನೇ ಬಂದ ಕೆಲವು ಮಂದಿ ಭಕ್ತ-ಶಿಷ್ಯಂದಿರ ಜೀವದ ಅರಕೆ, ಶ್ರೀಮಾತೆಯವರ ಪ್ರಸಾದ ಪಡೆಯಬಹುದೇ ಎಂದು. ಶ್ರೀಮಾತೆ ಅವರಿಗೆ ತಿಳಿಯ ಹೇಳಿ, ತಮಗಿಂತ ಮೊದಲೇ ಊಟ ಮಾಡಿಸಿದರು. ಅವರೆಂದರು: ''ಈಗ ನೀವು ಕುಳಿತು ಹೊಟ್ಟೆ ತುಂಬಾ ಊಟ ಮಾಡಿ, ನಾನು ಊಟ ಮಾಡುವುದು ತಡವಾದೀತು. ನಿಮಗೋಸ್ಕರ ನಾನು ಪ್ರಸಾದ ತೆಗೆದಿಡುತ್ತೇನೆ. ಆ ಮೇಲೆ ಖಂಡಿತ ನಿಮಗದು ಸಿಗುತ್ತದೆ!'' ಮಧ್ಯಾಹ್ನ ಶ್ರೀಮಾತೆ ಸ್ವಲ್ಪ ಅನ್ನ-ಹಾಲು ತೆಗೆದುಕೊಳ್ಳುತ್ತಿದ್ದರು. ಒಂದಿಷ್ಟು ಪಲ್ಯ ಬಾಯಿಗೆ ಹಾಕಿಕೊಂಡು, ತಟ್ಟೆಯಲ್ಲಿದ್ದ ಹಾಲಿನೊಂದಿಗೆ ನಾಲ್ಕು ತುತ್ತು ಅನ್ನ ಮಿಶ್ರಣ ಮಾಡಿದರು. ತಾವು ಸ್ವಲ್ಪ ಸ್ವೀಕರಿಸಿ, ಪ್ರಸಾದವನ್ನು ಕೇಳಿದ ಭಕ್ತರನ್ನು ತಮ್ಮ ಬಳಿಗೆ ಕರೆದರು. ಅವರು ಅಲ್ಲಿಗೆ ಬಂದಾಗ ಶ್ರೀಮಾತೆ ನಗುಮುಖದಿಂದ ಹೇಳಿದರು, ''ಮಗೂ! ಇದನ್ನು ತೆಗೆದುಕೋ! ಪ್ರಸಾದ ಬೇಕು ಅಂತ ಕೇಳಿದೆ. ಈಗ ಕುಳಿತುಕೊಂಡು ತೃಪ್ತಿಯಾಗುವಷ್ಟು ತಿನ್ನು!'' ತಮ್ಮ ಶಿಷ್ಯನ ಜೀವ ಆನಂದದಿಂದ ತುಂಬಿ ತುಳುಕಿದಾಗ, ಶ್ರೀಮಾತೆಯವರಿಗೂ ಪರಮಾನಂದ! ಅಂತೆಯೇ ಹೀಗೂ ಆದದ್ದಿದೆ — ಒಬ್ಬಾತ ಭಕ್ತ ಶ್ರೀಮಾತೆಯವರ ಪ್ರಸಾದ ಪಡೆಯುವ ಸಲುವಾಗಿ ತುಂಬ ಆಗ್ರಹಪಡಿಸಿದ. ಆಗ ಶ್ರೀಮಾತೆ ಒಂದು ಸಂದೇಶ (ಸಿಹಿ ತಿಂಡಿ) ವನ್ನು ಕೈಗೆ ತೆಗೆದುಕೊಂಡು, ಮೊದಲು ಶ್ರೀರಾಮಕೃಷ್ಣರ ಮುಂದೆ ಅದನ್ನು ತೋರಿಸಿ ದೃಷ್ಟಿಭೋಗ [೧] ಮಾಡಿಸಿದರು; ಅನಂತರ ಅದನ್ನು ತಮ್ಮ ನಾಲಿಗೆಯ ತುದಿಯಿಂದ ಸ್ಪರ್ಶಿಸಿ, ತಮ್ಮ ಪ್ರಸಾದ ಮಾಡಿ, ಅತ್ಯಂತ ಪ್ರೀತಿಯಿಂದ, ಆನಂದದಿಂದ ತಮ್ಮ ಶಿಷ್ಯನಿಗೆ ನೀಡುತ್ತಾ, ''ಮಗೂ! ಪ್ರಸಾದ ತಿನ್ನು!'' ಎಂದರು.

ಜಯರಾಮಬಾಟಿಯ ಮನೆಯಲ್ಲಿ ರಾತ್ರಿಯ ಊಟಕ್ಕೆ ಚಪಾತಿ-ಪಲ್ಯ, ಬೆಲ್ಲ, ಸ್ವಲ್ಪ ಹಾಲು ಇರುತ್ತಿತ್ತು. ಚಪಾತಿ ತುಂಬ ರುಚಿಕರವಾಗಿರುತ್ತಿತ್ತು. ಶ್ರೀಮಾತೆ ಸ್ವತಃ ತಾವೇ ಗೋಧಿ ಹಿಟ್ಟು ಕಲಸುತ್ತಿದ್ದರು. ತುಂಬ ಹೊತ್ತು ಹಿಟ್ಟನ್ನು ನಾದುತ್ತ ಅದನ್ನು ಮೆತ್ತಗೆ ಮಾಡುತ್ತಿದ್ದರು. ಕತ್ತಲಾದ ಮೇಲೆ ಅದನ್ನು ಶ್ರೀರಾಮಕೃಷ್ಣರಿಗೆ ನೈವೇದ್ಯ ಮಾಡಿ, ಅದನ್ನು ಚೆನ್ನಾಗಿ ಮುಚ್ಚಿ ಇಟ್ಟು, ಅದರ ಬಳಿ ಅವರು ಕುಳಿತುಕೊಳ್ಳುತ್ತಿದ್ದರು — ಅದು ಆರಿ ತಣ್ಣಗಾಗದಂತೆ. ರಾತ್ರಿ ಹೊತ್ತು ಶಿಷ್ಯಂದಿರೆಲ್ಲ ಅದನ್ನು ತಿನ್ನುವರು; ಸಾಯಂಕಾಲ ಅವರೆಲ್ಲ ಶ್ರೀರಾಮಕೃಷ್ಣರ ಜಪ, ಧ್ಯಾನ ಮಾಡಿ ಅವರ ಸ್ಮರಣೆ ಮಾಡುತ್ತಾರೆ. ರಾತ್ರಿ ಹೊತ್ತು ಸಾಕಷ್ಟು ತಡವಾಗ

---

೧ ಭಗವಂತ ನೈವೇದ್ಯವನ್ನು ತನ್ನ ನೋಟದಿಂದಲೇ ಸ್ವೀಕರಿಸುತ್ತಾನೆ ಎನ್ನುತ್ತಾರೆ. ಇದಕ್ಕೆ 'ದೃಷ್ಟಿಭೋಗ' ಎಂದು ಹೆಸರು.

ದಿದ್ದರೆ ಅವರಿಗೆ ಹಸಿವಾಗದು, ಆದ್ದರಿಂದ ಹೊಟ್ಟೆ ತುಂಬಾ ತಿನ್ನಲಾಗದು. ಅದಕ್ಕೆ ಶ್ರೀಮಾತೆ ನೈವೇದ್ಯವನ್ನು ಹಾಗೆ ಇಡುತ್ತಿದ್ದರು. ದೀಪ ಮಿಣುಕು ಮಿಣುಕಾಗಿ ಉರಿಯುತ್ತಿತ್ತು. ಶ್ರೀರಾಮಕೃಷ್ಣರ ಮುಂದೆ ಧೂಪ ಹಾಕಿ, ಪ್ರಣಾಮ ಮಾಡಿ, ದೀಪವನ್ನು ಸಣ್ಣದು ಮಾಡಿ, ಶ್ರೀಮಾತೆ ಕಾಲು ಮಡಚಿ ಕುಳಿತುಕೊಳ್ಳುತ್ತಿದ್ದರು. ಅವರ ಮನಸ್ಸು ಎತ್ತ, ಯಾವ ರಾಜ್ಯದತ್ತ ಸಂಚರಿಸುವುದೋ ಹೇಳಬಲ್ಲವರಾರು? ಎಲ್ಲವೂ ನಿಶ್ಶಬ್ದವಾಗಿಬಿಡುವುದು.

ಶ್ರೀಮಾತೆಯವರು ಮಾಡುತ್ತಿದ್ದ ಶ್ರೀರಾಮಕೃಷ್ಣರ ಪೂಜೆಗಾಗಿ ನಾನು ಪ್ರತಿನಿತ್ಯ ಬಿಲ್ವಪತ್ರೆ ಹಾಗೂ ಹೂಗಳನ್ನು ಸಂಗ್ರಹಿಸಿ ತರುತ್ತಿದ್ದೆ. ಒಂದು ದಿನ ನನಗೆ ತುಳಸೀದಳಗಳನ್ನು ತರಲು ಮರೆತು ಹೋಯಿತು. ಶ್ರೀಮಾತೆ ಬೇಸರಿಸಿಕೊಂಡು ಹೇಳಿದರು, ''ನೀನು ತುಳಸಿ ತರಲಿಲ್ಲ! ತುಳಸಿ ಎಷ್ಟೊಂದು ಪವಿತ್ರವೆಂದರೆ, ಅದನ್ನು ಯಾವುದಕ್ಕೆ ಹಾಕಿದರೂ, ಅದನ್ನು ಅದು ಶುದ್ಧಗೊಳಿಸುವುದು'' ಎಂದರು. ನಾನು ತುಂಬ ದುಃಖಪಟ್ಟುಕೊಂಡು ಕೂಡಲೇ ತುಳಸೀಪತ್ರೆಗಳನ್ನು ತಂದು ಕೊಟ್ಟೆ. ಆ ಕ್ಷಣದಿಂದಲೇ ನನ್ನ ಜೀವನದಲ್ಲಿ ನನ್ನಲ್ಲಿ ತುಳಸಿಯ ಮೇಲೆ ವಿಶೇಷ ಭಕ್ತಿ ಹುಟ್ಟಿಕೊಂಡಿತು. ಪ್ರತಿದಿನವೂ ಶ್ರೀಮಾತೆ ತಮ್ಮ ಪೂಜೆ ಮುಗಿದ ಬಳಿಕ ನೆಲಕ್ಕೆ ತಲೆಯನ್ನು ಸ್ಪರ್ಶಿಸಿ ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡುತ್ತಿದ್ದರು. ಅನಂತರ ತೀರ್ಥವನ್ನು ಕುಡಿಯುವಾಗ ಪೂಜೆಯ ನಿರ್ಮಾಲ್ಯದಿಂದ ಒಂದು ತುಳಸಿಯ ಎಲೆ ಹಾಗೂ ಒಂದು ಬಿಲ್ವಪತ್ರೆಯನ್ನು ತೆಗೆದು ಬಾಯಿಗೆ ಹಾಕಿಕೊಳ್ಳುತ್ತಿದ್ದರು.

ಜಯರಾಮಬಾಟಿಯಲ್ಲಿ ಒಂದು ದಿನ ಶ್ರೀಮಾತೆಯವರ ಬಳಿಗೆ ಒಂದು ಭಕ್ತದಂಪತಿಗಳು ಬಂದಿದ್ದರು : ಅವರು ನಡೆದುಕೊಂಡು ಬಂದಿದ್ದರಿಂದ ತುಂಬ ಆಯಾಸಗೊಂಡಿದ್ದರು. ಜೊತೆಗೆ ಅವರ ನಾಲ್ಕು ಮಂದಿ ಮಕ್ಕಳು. ಒಂದು ಮಗುವಿಗೆ ಮಲೇರಿಯಾ ಜ್ವರ ಬೇರೆ. ಅವರು ಬಂದು ನೋಡುತ್ತಾರೆ — ಒಂದು ಸಣ್ಣ ಮನೆಯಿದೆ, ಅದರ ತುಂಬ ಜನ. ಅವರು ಎಲ್ಲಿ ತಂಗುವರೋ, ಎಲ್ಲಿ ಕುಳಿತುಕೊಳ್ಳುವರೋ! ಶ್ರೀಮಾತೆಯವರಾದರೂ ಎಲ್ಲಿದ್ದಾರೋ! ಅಂತೂ ಶ್ರೀಮಾತೆಗೆ ಅವರು ಬಂದಿರುವ ವಾರ್ತೆ ತಿಳಿದು ಬಂತು. ಅವರನ್ನು ಒಳಗೆ ಕರೆದರು. ತಾವೇ ಮುಂದೆ ಹೋಗಿ ಮಕ್ಕಳೊಂದಿಗಿದ್ದ ಸ್ತ್ರೀಯನ್ನು ಅತ್ಯಂತ ಪ್ರೀತಿಯಿಂದ ತಮ್ಮ ಕೋಣೆಯ ವರಾಂಡದ ಕಡೆಗೆ ಕರೆದೊಯ್ದರು. ಶ್ರೀಮಾತೆಯವರ ವಾತ್ಸಲ್ಯಪೂರಿತವಾದ ''ಬಾರಮ್ಮಾ'' ಎಂಬ ಮಾತನ್ನು ಕೇಳಿದ ಕೂಡಲೇ ಆಕೆಯ ದುಃಖ, ವಿಷಾದ ಭಾವಗಳೆಲ್ಲ ಮಾಯವಾದವು; ಹೃದಯ ತುಂಬಿ ಬಂತು, ಮುಖ ಅರಳಿತು. ಶ್ರೀಮಾತೆಯವರ ಪ್ರೀತಿಯ ಮಾಂತ್ರಿಕ ಸ್ಪರ್ಶದಿಂದ ಒಂದು ಕ್ಷಣದಲ್ಲಿ ಇಡೀ ದೃಶ್ಯವೇ ಬದಲಾಯಿತು. ಆ ಕೂಡಲೇ ಮಕ್ಕಳನ್ನು ಮಲಗಿಸಲು, ಭಕ್ತರನ್ನು ಕುಳ್ಳಿರಿಸಲು ಹಾಗೂ ಅವರು ವಿಶ್ರಮಿಸಲು ವ್ಯವಸ್ಥೆಯಾಯಿತು. ಶ್ರೀಮಾತೆ ತಮ್ಮ ಕೋಣೆಯ ಬಾಗಿಲ ಬಳಿಯಲ್ಲಿ ಚಾಪೆ ಹರಡಿಕೊಟ್ಟರು. ಅದಷ್ಟೇ ಅಲ್ಲ ಮಕ್ಕಳಿಗೆ ಹಾಲು ಔಷಧಿ ಇವನ್ನೆಲ್ಲ ಕೊಡಿಸಲು ವ್ಯವಸ್ಥೆ ಮಾಡಿದರು. ತಾಯಿಯ ಮನೆಯಲ್ಲಿ ಅಥವಾ ಹೆಣ್ಣುಮಕ್ಕಳಿಗೆ ತವರಿನಲ್ಲಿ ಏನು ತಾನೇ ಅಭಾವವಿದ್ದೀತು? ಅಲ್ಲಿ ಸಂಕೋಚವಾದರೂ ಏನು? ಸ್ವಲ್ಪ ಹೊತ್ತಿನಲ್ಲೇ ಆ ಹೆಂಗಸು ಶ್ರೀಮಾತೆಯವರ ಮನೆಯ ಉಳಿದ ಹೆಂಗಸರೊಂದಿಗೆ ಮನೆ ಸೊಸೆಯಂತೆ ತಂಬಿಗೆ ತೆಗೆದುಕೊಂಡು ಬಾಂಡೂಜಿ ಕೊಳಕ್ಕೆ ಸ್ನಾನಮಾಡಲು, ನೀರು ತರಲು ಹೊರಟದ್ದು ಕಂಡು ಬಂತು.

ಭಕ್ತದಂಪತಿಗಳು ಮರಳುತ್ತಿದ್ದಾರೆ, ಶ್ರೀಮಾತೆ ಹೊರ ಬಾಗಿಲಿನಲ್ಲಿ ಎರಡೂ ಕಣ್ಣುಗಳಿಂದ ನೀರು ಸುರಿಸುತ್ತಾ, ನೆಟ್ಟ ನೋಟದಿಂದ ಅವರು ಮರೆಯಾಗುವವರೆಗೂ, ಅವರಿಬ್ಬರೂ ಹೋಗುತ್ತಿದ್ದುದನ್ನೇ ನೋಡುತ್ತಿದ್ದಾರೆ. ಅವರು ಕಣ್ಣಿಂದ ಮರೆಯಾದ ನಂತರ ಶ್ರೀಮಾತೆ ನಿಟ್ಟುಸಿರುಬಿಟ್ಟು ಒಳಬಂದು, ನಳಿನಿ ದೀದಿಯ ಕೋಣೆಯ ವರಾಂಡದಲ್ಲಿ ಕಾಲು ಮಡಚಿ, ಮಡಿಲಲ್ಲಿ ಕೈಯಿಟ್ಟು ಅತ್ಯಂತ ವಿಷಾದಭಾವದಿಂದ ಕುಳಿತುಕೊಂಡರು. ಸ್ವಲ್ಪ ಹೊತ್ತಿನ ನಂತರ ಅವರು ಹಠಾತ್ತನೆ ನೋಡಿದರು — ಭಕ್ತ ದಂಪತಿಗಳ ಒಂದು ಅಡ್ಡಪಂಚೆ ಅಲ್ಲೇ ಬಿದ್ದಿತ್ತು. ಅದನ್ನು ನೋಡಿದ ಶ್ರೀಮಾತೆ ಅತ್ಯಂತ ದುಃಖಪಟ್ಟುಕೊಂಡರು. ಅವರ ಸೇವಕ ಶಿಷ್ಯ[೨] ಅದನ್ನು ಕೈಗೆತ್ತಿಕೊಂಡು, ಮರಳಿ ಆ ದಂಪತಿಗಳಿಗೆ ಕೊಡಲು ಅಲ್ಲಿಂದ ವೇಗವಾಗಿ ಹೊರಟ. ಇನ್ನೂ ಅವರು ಹೆಚ್ಚು ದೂರ ಹೋಗಿರಲಿಲ್ಲ. ಪಂಚೆಯನ್ನು ನೋಡಿದ ಅವರಿಗೆ ತುಂಬ ನಾಚಿಕೆಯಾಯಿತು. ಶಿಷ್ಯನ ಮುಂದೆ ಅವರು ಕೃತಜ್ಞತೆಯನ್ನು ವ್ಯಕ್ತಪಡಿಸಿ, ಅಡ್ಡಪಂಚೆಯನ್ನು ಸ್ವೀಕರಿಸಿದರು. ಅನಂತರ ಸಂತಸದಿಂದ ತಮ್ಮ ಪ್ರಯಾಣ ಮುಂದುವರಿಸಿದರು. ಶಿಷ್ಯ ಮರಳಿ ಬಂದು ಶ್ರೀಮಾತೆಯವರಿಗೆ ಎಲ್ಲವನ್ನು ವರದಿ ಮಾಡಿದ. ಶ್ರೀಮಾತೆಯವರ ಮನಸ್ಸು ಪ್ರಸನ್ನವಾಯಿತು.

ಶ್ರೀಮಾತೆ ಇನ್ನೂ ಅದೇ ಜಾಗದಲ್ಲೇ ಶೋಕದಿಂದ ತುಂಬಿದ ಹೃದಯದಿಂದ ಕುಳಿತಿದ್ದರು. ಶಿಷ್ಯ ವಿಶ್ರಾಂತಿ ಪಡೆಯಲು ಹೊರಗಿನ ಕೋಣೆಗೆ ಹೊರಟಿದ್ದ. ಹಠಾತ್ತನೆ ಅವನು ಶ್ರೀಮಾತೆಯವರು ದುಃಖದಿಂದ ಕೂಡಿದ ಆರ್ತಸ್ವರದೊಂದಿಗೆ ಅಳುವ ಧ್ವನಿಯನ್ನು ಕೇಳಿಸಿಕೊಂಡ —''ಅಯ್ಯೋ - ನನ್ನ ಮಗು, ನಾಳೆ ಅವಳಿಗೆ ಸ್ನಾನ ಮಾಡಲು, ಬಟ್ಟೆ ಉಡಲು ಸಾಧ್ಯವಾಗದು. ಸೀರೆ ಹುಡುಕುತ್ತಾ ಅವಳಿಗೆ ನೆನಪಾದೀತು, ತಾಯಿಯ ಮನೆಯಲ್ಲಿ ಅದನ್ನು ಬಿಟ್ಟು ಬಂದಿದ್ದೇನೆ ಅಂತ.'' ಶಿಷ್ಯ ಆತಂಕದಿಂದ ಓಡುತ್ತ ಶ್ರೀಮಾತೆಯವರ ಮುಂದೆ ಬಂದು ನಿಂತ. ಭಕ್ತೆ ಹೆಣ್ಣುಮಗಳು ಸ್ನಾನ ಮಾಡಿ, ಒದ್ದೆಯಾದ ಸೀರೆ ಇತ್ಯಾದಿ ಬಟ್ಟೆಬರೆಗಳನ್ನು ಪುಣ್ಯಪುಕುರ ಕೆರೆಯ ದಡದಲ್ಲಿ ಒಣಗಿಸಲು ಹರಡಿದ್ದಳು. ಹೊರಡುವಾಗ ಅದು ನೆನಪಿಲ್ಲದೆ, ಅವನ್ನೆಲ್ಲ ಅಲ್ಲೇ ಬಿಟ್ಟು ಹೋಗಿದ್ದಳು. ಇದುವರೆಗೂ ಹೃದಯದ ಒಳಗೆ ಅವಿತಿದ್ದ ದುಃಖದ ನಿಟ್ಟುಸಿರೆಲ್ಲ ಒಮ್ಮೆಲೆ ಹೊರಬಂತು. ಅವರು ದುಃಖ

---

೨ ಸ್ವಯಂ ಲೇಖಕರು.

ದಿಂದ ಅಳತೊಡಗಿದರು. ಮಕ್ಕಳಿಲ್ಲದ ಒಬ್ಬಾಕೆ ಕಠಿಣವಾಗಿ ಹೇಳಿದಳು: ''ಆ ಹುಡುಗಿ ಅಷ್ಟೊಂದು ಮಂದಿ ಮಕ್ಕಳು ಮರಿಗಳನ್ನು ಅದು ಹೇಗೆ ನೋಡಿಕೊಳ್ಳುತ್ತಾಳೋ!'' ಅವಳ ಕರ್ಕಶ ಸ್ವರ, ಕಠೋರವಾದ ಮಾತುಗಳು ಶ್ರೀಮಾತೆಯವರ ದುಃಖವನ್ನು ಇನ್ನಷ್ಟು ಹೆಚ್ಚಿಸಿತು. ಅವರು ಕಣ್ಣೀರು ಸುರಿಸುತ್ತಾ ತಡವರಿಸುತ್ತಾ ಹೇಳತೊಡಗಿದರು: ''ಮರೆತು ಹೋಗುವುದಂತು ಸಾಮಾನ್ಯವೆ, ಅವಳಿಗಾದರೂ ಬಿಟ್ಟು ಹೋಗಲು ಹೇಗೆ ಮನಸ್ಸಾದೀತು? ಒಂದು ರಾತ್ರಿಕೂಡ ನನ್ನ ಬಳಿ ಇರುವಂತಾಗಲಿಲ್ಲ ; ಹೃದಯ ಬಿಚ್ಚಿನಾಲ್ಕು ಮಾತನ್ನಾಡಲೂ ಸಾಧ್ಯವಾಗಲಿಲ್ಲ'' ಎಂದರು. ಶಿಷ್ಯ ಆ ಬಟ್ಟೆಬರೆಯತ್ತ ನೋಡುತ್ತಿದ್ದಂತೆ ನಳಿನೀ ದೀದಿ ತುಸು ಯಜಮಾನಿಕೆಯ ಧ್ವನಿಯಿಂದ ಹೇಳಿದಳು, ''ಈಗ ತಾನೇ ನೀನು ಓಡಿ ಹೋಗಿ ಬಂದೆ. ಇನ್ನು ನೀನು ಹೋಗಬೇಕಿಲ್ಲ. ಇಷ್ಟರಲ್ಲೇ ಅವರು ತುಂಬ ದೂರ ಹೋಗಿರುತ್ತಾರೆ!'' ಶ್ರೀಮಾತೆಯವರತ್ತ ನೋಡುತ್ತಿದ್ದ ಶಿಷ್ಯನಿಗೆ ಇನ್ನು ಅಲ್ಲಿರಲಾಗಲಿಲ್ಲ. ಸೀರೆಯನ್ನು ಕೈಗೆತ್ತಿಕೊಂಡು ಅವನು ಶ್ರೀಮಾತೆಯವರಿಗೆ ಹೇಳಿದ, ''ತುಂಬಾ ದೂರ ಹೋಗಿರಲಾರರು, ಒಂದು ಕ್ಷಣದಲ್ಲೇ ಅವರಿಗೆ ಇದನ್ನು ಕೊಟ್ಟು ಬರುತ್ತೇನೆ.'' ಶ್ರೀಮಾತೆಯವರ ಮುಖ ಅರಳಿತು, ಅವರು ಪ್ರೀತಿಯಿಂದ, ''ತುಂಬಾ ಬಿಸಿಲಿದೆ, ಮಗೂ. ಕೊಡೆ ತೆಗೆದುಕೊಂಡು ಹೋಗು'' ಎಂದರು. ಆ ಭಕ್ತರು ದೂರ ಹೋಗಿದ್ದರು. ಶಿಷ್ಯ ಓಡುತ್ತಾ ಬರುತ್ತಿದ್ದುದನ್ನು ನೋಡಿ ಅವರಿಗೆ ಆಶ್ಚರ್ಯವಾಯಿತು. ಸೀರೆಯನ್ನು ನೋಡಿದ ಕೂಡಲೇ ಅವಳಿಗೆ ನೆನಪಾಯಿತು — ಬಿಸಿಲಲ್ಲಿ ಒಣಗಿಸಲು ಸೀರೆಯನ್ನು ಹರಡಿದ್ದಳು. ಅದನ್ನು ತರಲು ಮರೆತಿದ್ದಳು ಎಂಬುದಾಗಿ. ಅವಳು ನಾಚಿಕೆ, ವಿನಯಗಳನ್ನು ವ್ಯಕ್ತಪಡಿಸುತ್ತ ವಿಷಾದದಿಂದ ಹೇಳಿದಳು, 'ಇಷ್ಟೊಂದು ಕಷ್ಟಪಟ್ಟು ಸೀರೆಯನ್ನು ತರಬೇಕಾಗಿರಲಿಲ್ಲ' ಎಂಬುದಾಗಿ. ಶಿಷ್ಯ ಅವಳಿಗೆ ಶ್ರೀಮಾತೆಯವರ ದುಃಖ ಹಾಗೂ ಆತಂಕದ ವಿಷಯವನ್ನೆಲ್ಲ ತಿಳಿಸಿದಾಗ ಅವಳು ಮೊದಲು ವಿಸ್ಮಯದಿಂದ ದಂಗಾದಳು; ಅನಂತರ ಶ್ರೀಮಾತೆಯವರ ಪ್ರೀತಿಯನ್ನು ನೆನೆದು ಅವಳ ದೇಹ ಪುಳಕಿತಗೊಂಡಿತು ಹಾಗೂ ಅವಳ ಹೃದಯ ಕರಗಿತು.

ಇಂಥ ಸಂಬಂಧ ಶ್ರೀಮಾತೆಯವರಿಗೆ ತಮ್ಮ ಶಿಷ್ಯಂದಿರ ಮೇಲಿದ್ದ ಪ್ರೀತಿಯಲ್ಲ. ಇಷ್ಟೊಂದು ಸ್ವಲ್ಪ ಸಮಯದಲ್ಲಿ ಇಂಥ ಸಂಬಂಧ ಉಂಟಾಗುವುದು ಎಲ್ಲೂ ಸಾಧ್ಯವಿಲ್ಲ. ಅದು ಕೆಲವೇ ಕ್ಷಣಗಳ ಭೇಟಿಯಷ್ಟೆ. ಆದರೆ ಅಂಥ ಪ್ರೀತಿಯ ಸ್ಪರ್ಶವನ್ನು ಹೊಂದಿದವರಿಗೆ ಅದು ಚಿರಸ್ಥಾಯಿಯಾಗಿ ನಿಲ್ಲುವುದು. ಬಹಳ ಕಾಲ ತಾಯಿಯನ್ನು ಕಳೆದುಕೊಂಡವನು ಮತ್ತೆ ತಾಯಿಯನ್ನು ಪಡೆದಂತೆ ಅದು. ಶ್ರೀಮಾತೆಯವರ ಬಳಿಗೆ ಒಳ್ಳೆಯವರು, ಕೆಟ್ಟವರು ಎಲ್ಲ ಬಗೆಯ ಶಿಷ್ಯಂದಿರೂ ಬರುತ್ತಿದ್ದರು. ತಮ್ಮ ಸಮರ್ಥರಾದ ಶಿಷ್ಯಂದಿರನ್ನು ಪ್ರಶಂಸೆ ಮಾಡಿದಾಗ ಅವರು ಅದನ್ನು ಕೇಳಿ ಸಂತಸಪಡುತ್ತಿದ್ದರು. ಇತರರೊಂದಿಗೆ ಆನಂದದಿಂದ, ''ಅವನು ನನ್ನ ಮಗ'' ಎನ್ನುತ್ತಿದ್ದರು. ಅದೇ ರೀತಿ ಕೆಟ್ಟ ಶಿಷ್ಯರ ನಿಂದೆಯನ್ನು ಶ್ರೀಮಾತೆ ಕೇಳಬೇಕಾಗುತ್ತಿತ್ತು, ಅದು ಅವರಿಗೆ ಕಷ್ಟವಾಗುತ್ತಿತ್ತು. ಆದರೆ ಇಬ್ಬರ ಮೇಲೂ ಶ್ರೀಮಾತೆಯವರ ಪ್ರೀತಿ, ವಾತ್ಸಲ್ಯಗಳು ಎಲ್ಲ ಸಂದರ್ಭಗಳಲ್ಲೂ ಸಮಾನವಾಗಿ ಇರುತ್ತಿದ್ದವು. ವ್ಯಾವಹಾರಿಕವಾಗಿ ಕೂಡ ಅವರು ಯಾವುದೇ ತಾರತಮ್ಯ ಮಾಡುತ್ತಿರಲಿಲ್ಲ. ಈ ಸಂದರ್ಭದಲ್ಲಿ ನವಾಸನದಲ್ಲಿ ವಾಸಿಸುತ್ತಿದ್ದ, ಶ್ರೀಮಾತೆಯವರ ಶಿಷ್ಯನ ಮೇಲೆ ಶ್ರೀಮಾತೆಯವರಿಗಿದ್ದ ಅಪಾರ ಪ್ರೀತಿಯನ್ನು ಸೂಚಿಸುವ ಒಂದು ಘಟನೆಯೊಂದು ನೆನಪಾಗುತ್ತಿದೆ. ಶ್ರೀಮಾತೆಯವರಿಂದ ದೀಕ್ಷೆ ಪಡೆದಿದ್ದ ಆ ಯುವಕ ಒಳ್ಳೆಯ ವಂಶದಲ್ಲಿ ಹುಟ್ಟಿದವನು, ಒಳ್ಳೆಯ ವಿದ್ಯಾಭ್ಯಾಸ ಪಡೆದಿದ್ದ ಹಾಗೂ ಗುಣಶಾಲಿ. ಆದರೆ ಅವನು ದಾರಿ ತಪ್ಪಿದ. ಅವನಿಗೆ ಶ್ರೀಮಾತೆಯವರ ಮೇಲೆ ತುಂಬಾ ಭಕ್ತಿಯೇನೋ ಇತ್ತು ನಿಜ. ಹಿಂದಿನಂತೆಯೇ ಅವನು ಅವರ ಬಳಿಗೆ ಬಂದು ಹೋಗುತ್ತಿದ್ದ. ಆದರೆ ಉಳಿದ ಭಕ್ತರಿಗೆ ಅದು ಸರಿಕಾಣಿಸಲಿಲ್ಲ. ಅವನು ಬರದಂತೆ ನಿಷೇಧ ಮಾಡಬೇಕೆಂದು ಅವರೆಲ್ಲ ಶ್ರೀಮಾತೆಯವರಿಗೆ ಹೇಳಿದರು. ಶ್ರೀಮಾತೆ ತಮ್ಮ ಶಿಷ್ಯನಿಗಾಗಿ ತುಂಬಾ ದುಃಖವನ್ನು ವ್ಯಕ್ತಪಡಿಸಿದರು, ನಿಜ. ಅನಂತರ ಹೇಳಿದರು, ''ಮಗೂ, ನಾನು ಅವನ ತಾಯಿಯಾಗಿ ಅವನಿಗೆ 'ಬರಬೇಡ' ಅಂತ ಹೇಳಲಾರೆ.'' ಆ ಶಿಷ್ಯ ಬಂದು ಹೋಗುವುದು ನಿಲ್ಲಲಿಲ್ಲ. ಅವನ ಮೇಲೆ ಶ್ರೀಮಾತೆಯವರ ಪ್ರೀತಿಯೂ ಕಡಿಮೆಯಾಗಲಿಲ್ಲ. ಆ ಶಿಷ್ಯನ ಮನಸ್ಸಿನಲ್ಲಿ ಕ್ರಮೇಣ ಪಶ್ಚಾತ್ತಾಪವುಂಟಾಯಿತು. ಅವನು ತಾನಾಗಿಯೇ ತನ್ನ ತಪ್ಪನ್ನು ಅರಿತುಕೊಳ್ಳತೊಡಗಿದ.

ಒಂಭತ್ತು-ಹತ್ತು ವರ್ಷದ ಹುಡುಗ ಗೋವಿಂದ ಎನ್ನುವವನು; ಜಯರಾಮಬಾಟಿಯಲ್ಲಿ ಶ್ರೀಮಾತೆಯವರ ಮನೆಯ ದನಕರುಗಳನ್ನು ನೋಡಿಕೊಳ್ಳುತ್ತಿದ್ದ. ಒಂದು ಸಲ ಅವನಿಗೆ ಮೈಕೈಯಲ್ಲಿ ವಿಪರೀತ ತುರಿಕೆ, ಉರಿಯುಂಟಾಯಿತು. ಒಂದು ದಿನ ರಾತ್ರಿ ಹೊತ್ತು ನೋವು ತಡೆಯಲಾಗದೆ ಅವನು ಅಳತೊಡಗಿದ. ಹುಡುಗನ ಅಳುವನ್ನು ಕೇಳಿದ ಶ್ರೀಮಾತೆಗೆ ನಿದ್ದೆ ಬರಲಿಲ್ಲ. ಮರುದಿನ ಬೆಳಿಗ್ಗೆ ಶ್ರೀಮಾತೆ ಗೋವಿಂದನನ್ನು ತಮ್ಮ ಕೋಣೆಯೊಳಕ್ಕೆ ಕರೆದೊಯ್ದು, ತಾವೇ ಬೇವಿನಸೊಪ್ಪು, ಅರಿಶಿನದ ಲೇಪ ಮಾಡತೊಡಗಿದರು. ಹುಡುಗನ ಕೈಗೆ ಸ್ವಲ್ಪ ಸ್ವಲ್ಪ ಲೇಪವನ್ನು ಕೊಟ್ಟು, ಹೇಗೆ ಅದನ್ನು ಲೇಪಿಸಬೇಕು ಎಂದು ತೋರಿಸಿಕೊಡುತ್ತಿದ್ದರು. ಅದೇ ರೀತಿ ಗೋವಿಂದ ಅದನ್ನು ಹಚ್ಚಿಕೊಳ್ಳುತ್ತಿದ್ದ. ಶ್ರೀಮಾತೆಯವರ ಪ್ರೀತಿ, ವಾತ್ಸಲ್ಯಗಳಿಂದ ಅವನ ಮನಸ್ಸು ಒಂದು ರೀತಿಯ ಅನಿರ್ವಚನೀಯವಾದ ಆನಂದದಿಂದ ಪ್ರಫುಲ್ಲವಾಯಿತು. ಅವರಿಬ್ಬರ ಮುಖವನ್ನು ನೋಡಿ, ಅವರ ಮಾತುಕತೆಗಳನ್ನು ಕೇಳಿ ಆ ಹುಡುಗ ಶ್ರೀಮಾತೆಯವರ ಮಗನಲ್ಲ ಎಂದು ಯಾರು ತಾನೇ ಹೇಳಿಯಾರು?

ಶ್ರೀಮಾತೆಯವರ ಮನೆಗೆ ಕೆಲಸದ ಆಳುಗಳು ಬರಲಿ, ಗಾಡಿ ಹೊಡೆಯುವವರು, ಪಲ್ಲಕ್ಕಿ ಹೊರುವವರು ಬರಲಿ, ಅಂಬಿಗರು

ಅಥವಾ ಮೀನುಗಾರ-ಮೀನುಗಾರ್ತಿಯರು ಬರಲಿ, ಅವರೆಲ್ಲರೂ ಶ್ರೀಮಾತೆಯವರ ಮಕ್ಕಳೇ ಆಗಿರುತ್ತಿದ್ದರು. ಭಕ್ತರಂತೆಯೇ ಅವರೆಲ್ಲರೂ ಶ್ರೀಮಾತೆಯವರ ಸ್ನೇಹ, ಪ್ರೀತಿಗಳಿಗೆ ಪಾತ್ರರಾಗುತ್ತಿದ್ದರು. ಕರುಣೆಯಿಂದ ತುಂಬಿದ ಅವರ ಪ್ರೀತಿಯ ನೋಟವನ್ನು ಯಾರೂ ತಮ್ಮ ಈ ಜನ್ಮದಲ್ಲೂ, ಮುಂದಿನ ಜನ್ಮದಲ್ಲೂ ಮರೆಯಲಾರರು. ಒಂದು ವೇಳೆ ಯಾವುದೇ ಸಂದರ್ಭದಲ್ಲಿ ಅದು ಮರೆತು ಹೋದರೂ, ದುಃಖ-ದುಮ್ಮಾನಗಳಲ್ಲಿ ಮುಳುಗಿ ಹೋದ ಕೂಡಲೇ ಅವರ ಮನಸ್ಸಿನಲ್ಲಿ ಅದೇ ಪ್ರೀತಿಯ ಕೋಮಲವಾದ ಕೃಪಾದೃಷ್ಟಿ ಮೇಲಕ್ಕೆದ್ದು ಬರುವುದು.

ಒಂದು ಸಲ ಒಬ್ಬಾಕೆ ಕೆಳವರ್ಗದ, ಶ್ರಮಜೀವಿಯಾದ ಹೆಣ್ಣುಮಗಳು ಯಾರೋ ಒಬ್ಬ ಭಕ್ತ ಕೊಟ್ಟು ಕಳುಹಿಸಿದ್ದ ವಸ್ತುಗಳನ್ನು ಶ್ರೀಮಾತೆಯವರ ಬಳಿಗೆ ತೆಗೆದುಕೊಂಡು ಬಂದಿದ್ದಳು. ಶ್ರೀಮಾತೆ ಅವಳಿಗೆ ಸ್ನಾನ, ಊಟ ಇತ್ಯಾದಿಗಳನ್ನೆಲ್ಲ ಮಾಡಿ ವಿಶ್ರಾಂತಿ ಪಡೆದುಕೊಂಡು ಹೋಗಲು ಹೇಳಿದ್ದರು. ವಿಶ್ರಾಂತಿ ಪಡೆದ ಮೇಲೆ ತುಂಬ ತಡವಾದುದನ್ನು ನೋಡಿದ ಶ್ರೀಮಾತೆ, ಅಂದು ರಾತ್ರಿ ಅಲ್ಲೇ ತಂಗಲು ಹೇಳಿದರು. ಶ್ರೀಮಾತೆಯವರ ಕೋಣೆಯ ವರಾಂಡದಲ್ಲಿ , ಬಾಗಿಲ ಬಳಿಯಲ್ಲೇ ಅವಳಿಗೆ ಮಲಗಲು ವ್ಯವಸ್ಥೆ ಮಾಡಲಾಯಿತು. ಆ ಹೆಣ್ಣುಮಗಳು ವಯಸ್ಸಿಗೆ ಬಂದಿದ್ದಳು; ಅವಳಿಗೆ ಮಲೇರಿಯಾ ರೋಗ ಬೇರೆ. ತುಂಬ ದೂರದಿಂದ ನಡೆದು ಬಂದಿದ್ದಳು ಆಕೆ. ಅಷ್ಟು ದೂರದಿಂದ ನಡೆದು ಬಂದು ತುಂಬ ಆಯಾಸಗೊಂಡಿದ್ದಳು, ರಾತ್ರಿಹೊತ್ತು ಅವಳಿಗೆ ಯಾವುದರ ಪರಿವೆಯೂ ಇರಲಿಲ್ಲ ; ಹಾಸಿಗೆಯನ್ನೆಲ್ಲ ಕೊಳೆಮಾಡಿಬಿಟ್ಟಿದ್ದಳು. ಶ್ರೀಮಾತೆಯವರು ಎಂದಿನಂತೆ ಬೆಳಿಗ್ಗೆ ಇನ್ನೂ ಕತ್ತಲಿರುವಾಗಲೇ ಎದ್ದು, ಬಾಗಿಲು ತೆರೆದು ನೋಡಿದಾಗ ಆಕೆಯನ್ನು ಇಂತಹ ಸ್ಥಿತಿಯಲ್ಲಿ ನೋಡಿದರು. ಈಗೇನು ಮಾಡುವುದು? ಉಳಿದವರೆಲ್ಲ ಎದ್ದು ಬಂದು ಇದನ್ನೆಲ್ಲ ನೋಡಿದರೆ ಶ್ರೀಮಾತೆಯವರ ಈ ದೀನ ಹೆಣ್ಣುಮಗಳ ಅಪಮಾನ-ನಿಂದೆಗಳಿಗೆ ಕೊನೆಯಿರಲಾರದು. ಶ್ರೀಮಾತೆಯವರಿಗೆ ತುಂಬಾ ಕಳವಳವಾಯಿತು. ಆ ಹೆಣ್ಣುಮಗಳಾದರೋ ಇನ್ನೂ ಗಾಢ ನಿದ್ರೆಯಲ್ಲಿ ಮುಳುಗಿದ್ದಾಳೆ. ಶ್ರೀಮಾತೆ ಮೆಲ್ಲನೆ ಅವಳನ್ನು ಎಬ್ಬಿಸಿದರು. ಮೃದುವಾದ ಮಾತುಗಳಿಂದ ಅವಳನ್ನು ಸಮಾಧಾನ ಮಾಡುತ್ತ, ಸದ್ದಿಲ್ಲದೆ ಅವಳಿಗೆ ತಿಂಡಿ ತಿನ್ನಲು ಕಡಲೆಪುರಿ, ಬೆಲ್ಲ ಇವುಗಳನ್ನು ಸೆರಗಿನಲ್ಲಿ ಕಟ್ಟಿಕೊಡುತ್ತ, ''ನೋಡಮ್ಮಾ, ನೀನು ಇನ್ನೂ ಬೆಳಗಾಗಿರುವಾಗಲೇ ಎದ್ದು ಹೊರಟುಬಿಟ್ಟರೆ, ಬಿಸಿಲಿನಲ್ಲಿ ನಡೆಯುವ ಕಷ್ಟವಿರಲಾರದು'' ಎಂದರು. ಅವಳು ಸಂತೋಷದಿಂದ ಶ್ರೀಮಾತೆಯವರಿಗೆ ಪ್ರಣಾಮ ಮಾಡಿ ಅಲ್ಲಿಂದ ಹೊರಟು ಹೋದಳು. ಶ್ರೀಮಾತೆ ತಾವೇ ಆ ಕೊಳೆಯನ್ನೆಲ್ಲ ತೆಗೆದು ಶುದ್ಧಗೊಳಿಸಿದರು. ಸಗಣಿಯಿಂದ ಸಾರಿಸಿ ವರಾಂಡವನ್ನೆಲ್ಲ ಸ್ವಚ್ಛಗೊಳಿಸಿದರು, ನಂತರ ಚಾಪೆಯನ್ನು ಚೆನ್ನಾಗಿ ತೊಳೆದು, ಕೆರೆಯ ದಡದಲ್ಲಿ ಒಣಗಿಸಲು ಹರಡಿದರು. ಯಾರಿಗೂ ಏನೊಂದೂ ಗೊತ್ತಾಗಲಿಲ್ಲ. ಅನಂತರ ಒಬ್ಬಾಕೆ ಭಕ್ತೆ ವರಾಂಡದಲ್ಲಿ ಯಾರು ಕೊಳೆ ಮಾಡಿದರು ಎಂದೆಲ್ಲ ವಿಚಾರಿಸಿದಾಗ ಘಟನೆಯ ವಿವರಗಳೆಲ್ಲ ತಿಳಿದುಬಂದವು.

*(ಮುಂದುವರಿಯುವುದು)*



ಶ್ರದ್ಧಾಂಜಲಿ

## ಪೂಜ್ಯ ಸ್ವಾಮಿ ಸುರೇಶಾನಂದಜಿ ಮಹಾರಾಜ್

**ಮೈ**ಸೂರು ಶ್ರೀರಾಮಕೃಷ್ಣ ಆಶ್ರಮದ ಅಧ್ಯಕ್ಷರಾಗಿದ್ದ ಪೂಜ್ಯ ಸ್ವಾಮಿ ಸುರೇಶಾನಂದಜಿ ಮಹಾರಾಜ್ ಅವರು ಶ್ರೀರಾಮಕೃಷ್ಣ ಪರಮಹಂಸರ ಜಯಂತಿಯಾದ ೨೦೧೯ರ ಮಾರ್ಚ್ ೮ರಂದು ದೈವಾಧೀನರಾದರು ಎಂದು ತಿಳಿಸಲು ವಿಷಾದಿಸುತ್ತೇವೆ. ೧೯೫೨ರಲ್ಲಿ ಅವರು ಬೆಂಗಳೂರು ರಾಮಕೃಷ್ಣ ಮಠದಲ್ಲಿ ಬ್ರಹ್ಮಚಾರಿಯಾಗಿ ಸೇರಿಕೊಂಡು, ಶ್ರೀಮತ್ ಸ್ವಾಮಿ ಯತೀಶ್ವರಾನಂದರಿಂದ ಮಂತ್ರದೀಕ್ಷೆಯನ್ನು ಪಡೆದರು. ಅನೇಕ ವರ್ಷಗಳ ಕಾಲ ತಮ್ಮ ಗುರುಗಳ ಸೇವೆ ಮಾಡುವ ಸುಯೋಗ ಅವರದಾಗಿತ್ತು . ಬೆಂಗಳೂರು, ಚಂಡೀಗಢ ಆಶ್ರಮಗಳಲ್ಲಿ ಸೇವೆ ಸಲ್ಲಿಸಿ, ನಂತರ ೧೯೭೨ರಿಂದ ೧೯೮೯ರ ವರೆಗೆ ಮೈಸೂರು ಶ್ರೀರಾಮಕೃಷ್ಣ ವಿದ್ಯಾಶಾಲೆಯ ಮುಖ್ಯಸ್ಥರಾಗಿದ್ದು, ಮುಂದೆ ೧೯೮೯ರಿಂದ ೧೯೯೭ರ ವರೆಗೆ ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಅಧ್ಯಕ್ಷರಾಗಿಯೂ ಕಾರ್ಯ ನಿರ್ವಹಿಸಿದರು. ೧೯೯೮ರ ಬಳಿಕ ವಿಶ್ರಾಂತ ಜೀವನ ನಡೆಸುತ್ತಿದ್ದ ಪೂಜ್ಯ ಸ್ವಾಮೀಜಿಯವರು ಬಿಳಿಗಿರಿ ರಂಗನ ಬೆಟ್ಟದಲ್ಲಿ ಏಕಾಂತವಾಸ ಮಾಡುತ್ತ ಸಾಧನೆ ನಡೆಸುತ್ತಿದ್ದರು. ಶ್ರೀರಾಮಕೃಷ್ಣ, ಶ್ರೀಮಾತೆ ಶಾರದಾದೇವಿ, ಸ್ವಾಮಿ ವಿವೇಕಾನಂದರ ಧ್ಯೇಯಾದರ್ಶಗಳಿಗೆ ಜೀವನವನ್ನು ಸಮರ್ಪಿಸಿಕೊಂಡ ಒಬ್ಬರು ಹಿರಿಯ ಸಂನ್ಯಾಸಿಯನ್ನು ನಾವು ಕಳೆದುಕೊಂಡಿದ್ದೇವೆ. ಅವರಿಗೆ ೯೦ ವರ್ಷ ವಯಸ್ಸಾಗಿತ್ತು .

ಶೈಕ್ಷಣಿಕ ಕ್ಷೇತ್ರದಲ್ಲಿ ಸ್ವಾಮೀಜಿ ಸಲ್ಲಿಸಿದ ಸೇವೆ ಅಮೋಘವಾದುದು. ಹಲವು ಮಂದಿ ವಿದ್ಯಾರ್ಥಿಗಳಿಗೆ ದಾರಿದೀಪವಾಗಿದ್ದರು ಪೂಜ್ಯ ಸ್ವಾಮೀಜಿ. ಬಡಜನರಿಗಾಗಿ ಮನೆ ಕಟ್ಟಿಸಿಕೊಡುವ, ಅವರ ಹಿತಕ್ಕಾಗಿ ದುಡಿಯುವ ಕಾರ್ಯದಲ್ಲಿ ಸದಾ ನಿರತರಾಗಿದ್ದ ಸ್ವಾಮೀಜಿಯವರು ತೋಟಗಾರಿಕೆ, ಶಾಸ್ತ್ರಾಧ್ಯಯನ ಮುಂತಾದ ಚಟುವಟಿಕೆಗಳಲ್ಲಿ ತಮ್ಮನ್ನು ಸದಾ ತೊಡಗಿಸಿಕೊಂಡವರು. ಅವರ ಆಳವಾದ ಜ್ಞಾನಸಂಪತ್ತು , ಹಾಸ್ಯಪ್ರಜ್ಞೆ, ವಿವೇಕಪೂರ್ಣವಾದ ಚಿಂತನೆಗಳು ಅನೇಕ ಮಂದಿ ಭಕ್ತರ, ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ನಡುವೆ ಮನೆಮಾತಾಗಿದೆ. ಪೂಜ್ಯರ ನಿಧನಕ್ಕೆ 'ವಿವೇಕ ಪ್ರಭ' ಪತ್ರಿಕಾ ಬಳಗವು ಶ್ರದ್ಧಾಂಜಲಿ ಸಲ್ಲಿಸುತ್ತಿದೆ.



# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

## ಭಾಗ ೨೭

ಸ್ವಾಮೀಜಿಯವರ ದೇಹತ್ಯಾಗದಿಂದ ವಿರಜಾನಂದರ ದೇಹ-ಮನಸ್ಸುಗಳು ಕಮರಿಹೋಗಿದ್ದ ಸಂದರ್ಭದಲ್ಲಿ ತುರೀಯಾನಂದರು ಅವರಿಗೆ ಸಾಂತ್ವನ ನೀಡುತ್ತ ಹೀಗೆ ಪತ್ರವೊಂದನ್ನು ಬರೆದಿದ್ದರು:

ಬೇಲೂರು ಮಠ
೧೮ ಅಕ್ಟೋಬರ್ ೧೯೦೨

''...ಸ್ವಾಮೀಜಿಯವರ ಭೌತಿಕ ಶರೀರವು ಕಣ್ಮರೆಯಾಗಿದ್ದರೂ ಅವರ ಮಹಾಶಕ್ತಿಯು ಜಗತ್ತಿನಲ್ಲಿ ಜಾಜ್ವಲ್ಯಮಾನವಾಗಿದೆ. ಆ ಶಕ್ತಿಯು ಮುಂದೆ ವರ್ಧಿಸುತ್ತ ತನ್ನ ಕೆಲಸ ಮಾಡುತ್ತಲೇ ಹೋಗುತ್ತದೆ. ನೀನವರ ಆಶೀರ್ವಾದ ಪಡೆದಿರುವೆ. ನಿನಗೆ ಮಂಗಳವಾಗಿಯೇ ಆಗುತ್ತದೆ. ಅವರ ಕೆಲಸದಲ್ಲಿ ನಿರತನಾಗುವ ಇಚ್ಛೆಯನ್ನು ಇಟ್ಟುಕೋ. ಈ ಜೀವನದಲ್ಲಿ ಇದಕ್ಕಿಂತಲೂ ಹೆಚ್ಚಿನದಾದ ಸದುದ್ದೇಶ ಇನ್ನೇನಿರಲು ಸಾಧ್ಯ?... ಗುರಿ ತಲುಪುವ ವಿಷಯದಲ್ಲಿ ಶಂಕಿಸಬೇಡ. ದೃಢ ವಿಶ್ವಾಸದಿಂದ ಸಾಧನೆಯನ್ನು ಮುಂದುವರಿಸುತ್ತ ಹೋಗು. ಬೇಕಾಗುವ ಸಹಾಯವನ್ನು ಅವರೇ ಒದಗಿಸುತ್ತಾರೆ. ಹಾಗೂ ಮುಂದೆ ಏನು ಮಾಡಬೇಕೆಂಬುದನ್ನೂ ತಿಳಿಸಿಕೊಡುತ್ತಾರೆ.''

— ನಿನ್ನ ಶುಭಾಕಾಂಕ್ಷಿ
ತುರೀಯಾನಂದ

ಸ್ವಾಮಿ ಪ್ರಕಾಶಾನಂದರು ಇಪ್ಪತ್ತು ವರ್ಷಗಳ ನಂತರ ಅಮೆರಿಕದಿಂದ ಕೆಲತಿಂಗಳ ಮಟ್ಟಿಗೆ ಭಾರತಕ್ಕೆ ಬಂದಿದ್ದರು. ವಿರಜಾನಂದರಿಗೆ ಆಗ ಬೇಲೂರು ಮಠಕ್ಕೆ ಬಂದುಹೋಗಲು ಮನಸ್ಸಿರಲಿಲ್ಲ. ಶ್ಯಾಮಲಾತಾಲ್‌ನಲ್ಲೇ ಒಂದು ಕಡೆ ಸುಮ್ಮನೆ ಇದ್ದುಬಿಡುವುದೇ ಲೇಸು ಎಂದೆನಿಸುತ್ತಿತ್ತು. ಹಾಗಿದ್ದರೂ ಸಹ ತನ್ನ ಸ್ನೇಹಿತರೂ, ಗುರುಭಾಯಿಯೂ ಆದ ಪ್ರಕಾಶಾನಂದರನ್ನು ಭೇಟಿಯಾಗುವ ಇಚ್ಛೆಯೂ ಇತ್ತು. ಸರಿ, ಪ್ರಕಾಶಾನಂದರು ಕಂಖಲ್ಲಿಗೆ ಬಂದಾಗ ವಿರಜಾನಂದರು ಅಲ್ಲಿಗೇ ಹೋಗಿ ಅವರನ್ನು ಭೇಟಿಯಾಗಿ ಬರುವುದೆಂದು ಪತ್ರದ ಮೂಲಕ ಖಚಿತಪಡಿಸಿಕೊಂಡರು. ಆದರೆ ಅದೃಷ್ಟವಶಾತ್ ಅಂದು ರೈಲು ತಪ್ಪಿಹೋಯಿತು. ಬೇರೆ ವಿಧಿಯಿಲ್ಲದೆ ಆಶ್ರಮಕ್ಕೆ ಹಿಂತಿರುಗಿದರು. ಪ್ರಕಾಶಾನಂದರನ್ನು



ಅವರು ಜೀವನದಲ್ಲಿ ಮತ್ತೊಮ್ಮೆ ನೋಡಲಾಗಲೇ ಇಲ್ಲ. ಕೆಲ ವರುಷಗಳಲ್ಲೇ (೧೩ನೇ ಫೆಬ್ರವರಿ ೧೯೨೭ರಲ್ಲಿ) ಅವರು ಅಮೆರಿಕದಲ್ಲಿ ದೇಹತ್ಯಾಗ ಮಾಡಿದರು. ವಿರಜಾನಂದರ ಹೃದಯದಲ್ಲಿ ಈ ಒಂದು ದುಃಖ ಕೊನೆಯವರೆಗೂ ಉಳಿದುಬಿಟ್ಟಿತ್ತು.

೧೯೨೩ರ ಜೂನ್ ೨೮ರಂದು ವಿರಜಾನಂದರ ೫೦ನೇ ಜನ್ಮದಿನ. ಅಂದು ಅವರು ತಮ್ಮ ಚಿಕ್ಕ ದೇವರಕೋಣೆಯಲ್ಲಿ ಠಾಕುರ್, ಶ್ರೀಮಾತೆ, ಸ್ವಾಮೀಜಿಯವರ ಚಿತ್ರಪಟಗಳನ್ನು ಮನಸಾರೆ ಅಲಂಕರಿಸಿದರು. ಬಗೆಬಗೆಯ ಪದಾರ್ಥಗಳನ್ನು ಮಾಡಿ ದೇವರಿಗೆ ನಿವೇದಿಸಿದರು. ಆಶ್ರಮದ ನಿವಾಸಿಗಳೆಂದರೆ ವಿರಜಾನಂದರು

ಮತ್ತು ಇಬ್ಬರು ಬ್ರಹ್ಮಚಾರಿಗಳು, ಅಷ್ಟೇ. ಆದರೂ ಮೂವರ ಉತ್ಸವವು ಚೆನ್ನಾಗಿಯೇ ನಡೆದಿತ್ತು.

ಸ್ವಲ್ಪ ಕಾಲದಲ್ಲೇ ಮತ್ತೆರಡು ವಿಯೋಗದ ನೋವನ್ನು ವಿರಜಾನಂದರು ಸಹಿಸಬೇಕಾಯಿತು. ಬಾಲ್ಯ ಸ್ನೇಹಿತರೂ, ಶ್ರೀಮಾತೆಯವರಿಂದ ದೀಕ್ಷೆಯ ಕೃಪೆ ಪಡೆದವರೂ ಆದ ಯದುಪತಿ ಚಟ್ಟೋಪಾಧ್ಯಾಯರು ಇದ್ದಕ್ಕಿದ್ದಂತೆ ಹೃದಯಾಘಾತದಿಂದ ಮೃತರಾಗಿದ್ದರು. ಇವರು ಶ್ಯಾಮಲಾತಾಲ್‌ನ ಉಚಿತ ಚಿಕಿತ್ಸಾಲಯಕ್ಕೆ ಉದಾರವಾಗಿ ಅನೇಕ ಸಹಾಯಗಳನ್ನೊದಗಿಸುತ್ತಿದ್ದರು. ರಾಮಕೃಷ್ಣ ಮಿಷನ್ನಿಗೆ ಕೆಲವು ಲಕ್ಷ ರೂಪಾಯಿಗಳನ್ನು ಉಯಿಲು ಬರೆದಿದ್ದರು. ೧೯೨೩ರ ಅಕ್ಟೋಬರ್ ೧೨ರಂದು ಬಾಲ್ಯಸ್ನೇಹಿತನೂ, ಗುರುಭಾಯಿಯೂ ಆದ ಶುಕುಲ್ (ಸ್ವಾಮಿ ಆತ್ಮಾನಂದರು) ಕಾಶಿಯಲ್ಲಿ ದೇಹತ್ಯಾಗ ಮಾಡಿದ್ದರು. ತಮ್ಮ ವೈರಾಗ್ಯ, ತಪಸ್ಸು ಹಾಗೂ ಶಾಸ್ತ್ರಜ್ಞಾನಗಳಿಗೋಸ್ಕರ ಶುಕುಲ್ ಮಹಾರಾಜರು ಸಕಲರ ಪ್ರೀತ್ಯಾದರ ಹಾಗೂ ಗೌರವಕ್ಕೆ ಪಾತ್ರರಾಗಿದ್ದರು. ವಿರಜಾನಂದರು ಅವರ ನೆನಪಿನಲ್ಲಿ ನೀಡುವ ಭಂಡಾರಕ್ಕಾಗಿ (ವೈಕುಂಠ ಸಮಾರಾಧನೆಗಾಗಿ) ಕಾಶಿಗೆ ಸ್ವಲ್ಪ ಕಾಣಿಕೆಯನ್ನು ಕಳುಹಿಸಿಕೊಟ್ಟರು.

ಶ್ಯಾಮಲಾತಾಲ್ ಆಶ್ರಮದ ಸಮೀಪದಲ್ಲಿ ಒಂದು ಬಂಗಲೆಯಿತ್ತು. ಅದರ ಮಾಲೀಕನಾದ ಮಿ. ಬ್ರೌನ್ ಬಂಗಲೆಯನ್ನು ಮತ್ತು ತನ್ನ ಜಮೀನನ್ನು ವಿರಜಾನಂದರಿಗೆ ಮಾರಲಿಚ್ಛಿಸಿದನು. ಅವನು ಬೆಲೆಯನ್ನು ಕಡಿಮೆಗೊಳಿಸುವುದಾಗಿಯೂ ಹೇಳಿದನು. ಆಶ್ರಮದ ಹತ್ತಿರದಲ್ಲೇ, ನಿರ್ಜನವಾದ ಪ್ರದೇಶದಲ್ಲಿರುವ ಈ ಬಂಗಲೆಯು ಸಾಧನೆ ನಡೆಸಲು ತುಂಬ ಪ್ರಶಸ್ತವಾಗಿದೆ ಎಂದೆನಿಸಿತು ವಿರಜಾನಂದರಿಗೆ. ಆದ್ದರಿಂದ ತುಂಬ ಉತ್ಸಾಹದಿಂದ ಅದನ್ನು ೧,೩೦೦/- ರೂಪಾಯಿಗೆ, ೧೯೨೪ರ ಆಗಸ್ಟ್‌ನಲ್ಲಿ ಖರೀದಿಸಿದರು. ಈ ಬಂಗಲೆಯಲ್ಲೇ ಈಗ ವಿರಜಾನಂದರು ಮೊದಲಿಗಿಂತ ಹೆಚ್ಚು ಸಮಯವನ್ನು ಸಾಧನೆಯಲ್ಲಿ ಕಳೆಯುತ್ತಿದ್ದರು.

ಶ್ಯಾಮಲಾತಾಲ್‌ನ ಉಚಿತ ದವಾಖಾನೆ ಹಾಗೂ ಆಸ್ಪತ್ರೆಯ ಕೆಲಸಗಳು ನಿಧಾನವಾಗಿ ರೂಪುಗೊಳ್ಳುತ್ತಿದ್ದವು. ಕೆಲವು ಸ್ನೇಹಿತರು ಮಾಸಿಕವಾಗಿ ಧನಸಹಾಯವನ್ನು ಕಳುಹಿಸುತ್ತಿದ್ದರು. 'ವಿವೇಕಾನಂದ ಆಶ್ರಮ'ದ ಅಧೀನದಲ್ಲೇ ಇದ್ದ ಆಸ್ಪತ್ರೆಗೆ 'ಶ್ರೀರಾಮಕೃಷ್ಣ ಸೇವಾಶ್ರಮ' ಎಂಬ ಹೆಸರನ್ನು ಇಡಲಾಯಿತು. ವೈದ್ಯಕೀಯ ಕ್ಷೇತ್ರದಲ್ಲಿ ಸಾಕಷ್ಟು ಅನುಭವವಿದ್ದ ಒಬ್ಬ ಸಂನ್ಯಾಸಿಯು ಶ್ಯಾಮಲಾತಾಲ್‌ನಲ್ಲೆ ಇರತೊಡಗಿದರು. ಪ್ರತಿವರ್ಷವೂ ಸೇವಾಕಾರ್ಯದ ವಿವರಣೆಯನ್ನು ಮುದ್ರಿಸಲಾಗುತ್ತಿತ್ತು. ವಿರಜಾನಂದರೇ ಸೇವಾಶ್ರಮದ ಸೆಕ್ರೆಟರಿಯಾಗಿದ್ದರು. ೧೯೨೪ರ ಜೂನ್ ತಿಂಗಳಲ್ಲಿ ದವಾಖಾನೆಯನ್ನು ಪ್ರತ್ಯೇಕವಾದ ಒಂದು ಚಿಕ್ಕ ಕಟ್ಟಡಕ್ಕೆ ವರ್ಗಾಯಿಸಲಾಗಿತ್ತು.

* * *

೧೯೨೬ರ ಏಪ್ರಿಲ್‌ನಲ್ಲಿ ಮಠ ಹಾಗೂ ಮಿಷನ್ನಿನ ಮಹಾಸಮ್ಮೇಳನವು ಕರೆಯಲ್ಪಟ್ಟಿತ್ತು. ಪ್ರತಿಯೊಂದು ಕೇಂದ್ರದಿಂದಲೂ ಪ್ರತಿನಿಧಿಗಳು ಬಂದಿದ್ದರು. ಅಮೇರಿಕದಿಂದ ಸ್ವಾಮಿ ಪರಮಾನಂದರೂ ಬಂದಿದ್ದರು. ವಿಪುಲವಾದ ಈ ಸಾಧು-ಭಕ್ತ ಸಮಾಗಮಕ್ಕೆ ವಿರಜಾನಂದರೂ ಸಹ ಬಂದೇ ಬರಬೇಕೆಂದು ತಿಳಿಸಿ ಶಾರದಾನಂದರು ಮೇಲಿಂದ ಮೇಲೆ ಪತ್ರವನ್ನು ಬರೆಯುತ್ತಿದ್ದರು. ಆದರೆ ಹೋಗಲು ವಿರಜಾನಂದರು ಒಪ್ಪುತ್ತಿರಲಿಲ್ಲ. ಆದರೇನು ಮಾಡುವುದು? ಪತ್ರದ ಮೇಲೆ ಪತ್ರವು ಬರುತ್ತಿದ್ದುದರಿಂದ 'ಒಂದು ತಿಂಗಳ ಮಟ್ಟಿಗೆ ಬರುವೆ' ಎಂದು ಮರುಪತ್ರ ಬರೆದರು. ಸ್ಟೇಷನ್ನಿಗೆ ಬಂದಿಳಿಯುತ್ತಿದ್ದಂತೆ ಅವರನ್ನು ಕರೆದೊಯ್ಯಲು ಬಂದಿದ್ದ ಸಂನ್ಯಾಸಿಗಳು, 'ನೋಡ್ತಾ ಇರಿ ಮಹಾರಾಜ್, ಇನ್ನು ಮುಂದೆ ನೀವು ಮಠದಲ್ಲೇ ಇರಬೇಕಾಗುತ್ತೆ' ಎಂದರು ನಗುತ್ತ. 'ಅದ್ಹೇಗೆ? ನೋಡೇಬಿಡೋಣ' ಎಂದರು ವಿರಜಾನಂದರು. ಆದರೆ ವಿರಜಾನಂದರಿಗೇ ಸೋಲಾಯಿತು. ಇನ್ನು ಮುಂದೆ ಅವರಿಗೆ ಹೆಚ್ಚಾಗಿ ಬಿಡುವು ಸಿಕ್ಕಲಿಲ್ಲ.

ಮಹಾಸಮ್ಮೇಳನವು ಏಳು ದಿನಗಳವರೆಗೆ ನಡೆಯಿತು. ಮಠ ಮತ್ತು ಮಿಷನ್ನಿನ ವರ್ತಮಾನದ ಹಾಗೂ ಭವಿಷ್ಯತ್ತಿನ ಕಾರ್ಯಪ್ರಣಾಳಿಕೆಗೆ ಸಂಬಂಧಿಸಿದ ಅನೇಕ ವಿಷಯಗಳ ಬಗ್ಗೆ ಚರ್ಚೆ ನಡೆಯಿತು. ಶ್ರೀರಾಮಕೃಷ್ಣರ ಸಂನ್ಯಾಸಿ ಶಿಷ್ಯರೆಲ್ಲರೂ ವೃದ್ಧರಾಗಿದ್ದರು. ಇತ್ತ ಮಠ ಹಾಗೂ ಮಿಷನ್ನಿನ ಕೆಲಸದ ವ್ಯಾಪ್ತಿಯೂ ವರ್ಧಿಸುತ್ತಿತ್ತು. ಈ ಕೆಲಸ ಕಾರ್ಯಗಳೆಲ್ಲವನ್ನೂ ವಿಶದವಾಗಿ ನೋಡಿಕೊಳ್ಳುವುದು ಕಷ್ಟಸಾಧ್ಯವಾಗುತ್ತಿತ್ತು. ಆದ್ದರಿಂದ ಶಾರದಾನಂದರು ೧೨ ಮಂದಿ ಯೋಗ್ಯ, ಕಾರ್ಯದಕ್ಷ ಸಂನ್ಯಾಸಿಗಳನ್ನು ಸೇರಿಸಿ ಒಂದು ವರ್ಕಿಂಗ್ ಕಮಿಟಿಯನ್ನು ರಚಿಸಿದರು. ಈ ಕಮಿಟಿಗೆ ಮಠ ಹಾಗೂ ಮಿಷನ್ನಿನ ಹಲವಾರು ಕೆಲಸಗಳ ನಿರ್ವಹಣೆಯ ಭಾರವು ವಹಿಸಲ್ಪಟ್ಟಿತು. ಶಾರದಾನಂದರು ವಿರಜಾನಂದರಿಗೆ, ''ಇವರೆಲ್ಲರಿಗಿಂತ ನೀನೇ ಹಳಬ; ಆದ್ದರಿಂದ ನೀನೇ ಈ ಕಮಿಟಿಯ ಸೆಕ್ರೆಟರಿಯಾಗಬೇಕು'' ಎಂದರು. ವಿರಜಾನಂದರ ನೂರಾರು ನೆಪಗಳು, ಅಸಮ್ಮತಿಗಳು ಶಾರದಾನಂದರ ಯುಕ್ತಿ ಹಾಗೂ ಕೋರಿಕೆಯ ಮುಂದೆ ನಿಲ್ಲಲಿಲ್ಲ. ಅವರು ಮತ್ತೆ ಜನನಿಬಿಡ ಕೋಲಾಹಲದ ನಡುವೆ ಕರ್ಮಯೋಗದಲ್ಲಿ ತೊಡಗಿದರು.

೧೯೨೭ರ ಪೂರ್ವಾರ್ಧದಲ್ಲಿ ಪ್ರಚಾರ ಕಾರ್ಯಕ್ಕೆಂದು ಸಂನ್ಯಾಸಿಗಳೊಬ್ಬರನ್ನು ಅಮೇರಿಕಾಗೆ ಕಳುಹಿಸಬೇಕಾಗಿ ಬಂತು. ಮಹಾಪುರುಷ ಮಹಾರಾಜರು ಮತ್ತು ಶರತ್ ಮಹಾರಾಜರು ವಿರಜಾನಂದರನ್ನೇ ಇದಕ್ಕಾಗಿ ಆಯ್ಕೆ ಮಾಡಿದರು. ೧೯೦೬ರಲ್ಲೂ ಒಮ್ಮೆ ವಿರಜಾನಂದರು ಅಮೇರಿಕಾಗೆ ಹೋಗುವುದೆಂದಾಗಿತ್ತು. ಅದಕ್ಕಾಗಿ ಎಲ್ಲ ಸಿದ್ಧತೆಗಳೂ ನಡೆದಿದ್ದವು. ಆದರೆ ಕೊನೆಗದು ಕೈಗೂಡಿರಲಿಲ್ಲ. ೨೧ ವರ್ಷಗಳ ನಂತರ ಮತ್ತದೇ ಸಂದರ್ಭ ಬಂದೊದಗಿದ್ದನ್ನು ಕಂಡು ಅವರಿಗೆ ತುಂಬ ವಿನೋದವೆನಿಸಿತು.

ಟ್ರಸ್ಟಿಗಳ ಮೀಟಿಂಗ್‌ನಲ್ಲಿ ಹಿರಿಯರ ಬೇಡಿಕೆಯನ್ನು ತಳ್ಳಿಹಾಕಲಾರದೆ ಕೊನೆಗೂ ಒಪ್ಪಿಕೊಂಡರು. ಯೂರೋಪಿನ ಉಡಿಗೆಯಲ್ಲಿ ವೀಸಾಗೆಂದು ಫೋಟೋವನ್ನೂ ತೆಗೆಸಲಾಯಿತು. ನಂತರ ಶ್ಯಾಮಲಾತಾಲ್‌ನಲ್ಲಿ ಎಲ್ಲ ಚಟುವಟಿಕೆಗಳ ಬಂದೋಬಸ್ತು ಮಾಡಿಬರುವ ಸಲುವಾಗಿ ಕೆಲದಿನಗಳ ಮಟ್ಟಿಗೆಂದು ಅಲ್ಲಿಗೆ ಹೋದರು. ಆದರೆ ಶ್ಯಾಮಲಾತಾಲ್‌ಗೆ ಹೋದ ನಂತರ ಎಲ್ಲ ತಲೆಕೆಳಗಾಗಿ ಹೋಯಿತು! ವಿಶದೀಕರಿಸಲಾಗದ ಯಾವುದೋ ಒಂದು ಶಕ್ತಿಯು ಅವರ ಮನಸ್ಸಿನಿಂದ ಅಮೆರಿಕಾಗೆ ಹೋಗುವ ಎಲ್ಲ ಸಂಕಲ್ಪವನ್ನೂ ಅಳಿಸಿಹಾಕಿತು. ಕಡೆಗವರು ಮಹಾಪುರುಷ ಮಹಾರಾಜರಿಗೆ ಹೀಗೆಂದು ಬರೆದರು: ''ಠಾಕೂರ್-ಮಾತೆ-ಸ್ವಾಮೀಜಿಯವರಲ್ಲಿ ಪ್ರಾರ್ಥನೆ ಮಾಡಲು ಕುಳಿತಾಗ ಹೊಸದಾದ ಈ ಅಮೆರಿಕಾದ ಕೆಲಸಕ್ಕೆ ಯಾವುದೇ ಪ್ರೇರಣೆ ಸಿಕ್ಕಲಿಲ್ಲ. ಇದರಿಂದ ನಾನು ಅಮೆರಿಕಾಗೆ ಹೋಗುವುದು ಅವರ ಇಚ್ಛೆಯಲ್ಲ ಎಂಬುದು ನನಗೆ ದೃಢವಾಗಿ ನಂಬಿಕೆಯಾಗಿ ಹೋಗಿದೆ.''

ಸ್ವಾಮಿ ಶಿವಾನಂದರು ಅದಕ್ಕುತ್ತರವಾಗಿ ಹೀಗೆ ಬರೆದರು:

೧೮.೭.೧೯೨೭

ಶ್ರೀಮಾನ್ ವಿರಜಾನಂದ,

ನಿನ್ನ ಜುಲೈ ೧೩ರ ಪತ್ರ Bolt from the Blue (ವಜ್ರಾಘಾತ)ದಂತಿತ್ತು. ನಾನು ಹಾಗೂ ಇಲ್ಲಿ ಎಲ್ಲರೂ ಅವಾಕ್ಕಾದೆವು... ನೀನು ಮಹಾಕರ್ಮವೀರ. ಸ್ವಾಮೀಜಿಯವರ ಅಣುಗ (ಪ್ರೀತಿಯ ಶಿಷ್ಯ, ಮಗ). ಇಲ್ಲಿಯ ಮೀಟಿಂಗ್‌ನಲ್ಲಿ ನೀನು ಯಥಾರ್ಥ ಸಂನ್ಯಾಸಿಯಂತೆ, ಅಮೆರಿಕಾದ ಕಾರ್ಯವನ್ನು ಕೈಗೆತ್ತಿಕೊಳ್ಳಲು ಸಾಹಸದಿಂದ ಸಮ್ಮತಿಸಿದ್ದೆ. ಅದಕ್ಕಾಗಿ ಎಲ್ಲ ಸಿದ್ಧತೆಗಳನ್ನೂ ಸ್ವಯಂ ನಡೆಸುತ್ತಿದ್ದೆ. ಇದರಿಂದ ನಮಗೆಲ್ಲರಿಗೂ ಮಹದಾನಂದವಾಗಿತ್ತು. ಇದು ಯಥಾರ್ಥ ಕರ್ಮವೀರ ಸ್ವಾಮೀಜಿಯವರ ಅನುಯಾಯಿಗಳಿಗೆ ತಕ್ಕುದಾಗಿದೆ, ಎಂದು ಭಾವಿಸಿದ್ದೆ. ಆದರೆ ಈಗೇಕೆ ಮತ್ತೆ ಕ್ಷುದ್ರಹೃದಯ ದೌರ್ಬಲ್ಯವು ಕಾಣಿಸಿಕೊಂಡಿದೆ ಎಂಬುದನ್ನು ತಿಳಿಯದಾದೆ... ಸಂಘದ ಆದೇಶವನ್ನು ರಾಮಕೃಷ್ಣರ ಆದೇಶವೆಂದೇ ತಿಳಿಯಬೇಕೆಂದು ಸ್ವಾಮೀಜಿ ಹೇಳಿಹೋಗಿದ್ದಾರೆ. ಅದನ್ನು ನೀನೂ ಸಹ ಚೆನ್ನಾಗಿ ಬಲ್ಲೆ. ಸಂಘದ ನಾವೆಲ್ಲರೂ ನಿನ್ನನ್ನು ಸಮರ್ಥನೆಂದೂ, ಸ್ವಾಮೀಜಿಯವರ ಪ್ರಿಯ ಶಿಷ್ಯನೆಂದೂ ತಿಳಿದೇ ಅಮೆರಿಕಾಗೆ ಹೋಗಿ ಅವರ ಕೆಲಸ ಮಾಡಲು ಹೇಳಿದ್ದೆವು. ನೀನೂ ಸಹ as an obedient son of Swamiji (ಸ್ವಾಮೀಜಿಯವರ ವಿಧೇಯಪುತ್ರನಂತೆ) ಹೋಗಲು ಸಮ್ಮತಿಸಿದೆ ಹಾಗೂ ಅದಕ್ಕಾಗಿ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದೆ. ಶ್ಯಾಮಲಾತಾಲ್‌ನಲ್ಲಿ ಹಠಾತ್ತಾಗಿ ನಿನ್ನನ್ನು ಮೋಹ ಕವಿದಿದೆ. ಇದಕ್ಕಾಗಿ ನಾವೆಲ್ಲ ಅತ್ಯಂತ ದುಃಖಿತರು. ಅದಲ್ಲದೆ ಮಿಷನ್ನಿನ ಕೆಲಸವೂ ಇದರಿಂದಾಗಿ ಅಸ್ತವ್ಯಸ್ತವಾಯಿತು. ಈಗಲೂ ಸಹ ಸ್ವಾಮೀಜಿಯವರು ನಿನ್ನ ಮನಸ್ಸನ್ನು ಪರಿವರ್ತಿಸಲೆಂದೇ ಆಂತರಿಕವಾಗಿ ಪ್ರಾರ್ಥಿಸುತ್ತಿದ್ದೇನೆ.... ಚೆನ್ನಾಗಿ ಆಲೋಚಿಸಿ ನೋಡು, ಹಾಗೂ ನಿನ್ನ ನಿರ್ಧಾರವನ್ನು ಬದಲಿಸು. ನಿನಗೆ ನನ್ನ ಶುಭಾಶೀರ್ವಾದಗಳು.

— ಇತಿ ನಿನ್ನ ಶುಭಾಕಾಂಕ್ಷಿ

ಶಿವಾನಂದ

ಪೂಜ್ಯರಾದ ಶಿವಾನಂದರ ಈ ಪತ್ರವನ್ನು ಪಡೆದ ನಂತರವೂ ವಿರಜಾನಂದರು ತಮ್ಮ ನಿರ್ಧಾರವನ್ನು ಬದಲಿಸಲಿಲ್ಲ. ಇದರಿಂದಾಗಿ ಮನದಲ್ಲಿ ದ್ವಂದ್ವವು ಇದ್ದಿರಲೂಬಹುದು. ಆದರೆ ಮುಂದೆ ಅವರು ಮಠ ಮತ್ತು ಮಿಷನ್ನಿನ ಗುರುತ್ವಪೂರ್ಣ ಕೆಲಸದಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಂಡಾಗ ದ್ವಂದ್ವವು ಅಳಿಸಿಹೋಗಿತ್ತು. ತಾವು ಆಗ ಪಾಶ್ಚಾತ್ಯಕ್ಕೆ ಪ್ರಚಾರಕಾರ್ಯಕ್ಕೆ ಹೋಗದಿದ್ದುದು ಭಗವಂತನ ಇಚ್ಛೆಯಿಂದಲೇ ಎಂಬುದು ಅವರ ವಿಶ್ವಾಸವಾಗಿತ್ತು.

ಮತ್ತೂ ಮೂರು ವರ್ಷಗಳು ಉರುಳಿಹೋದವು. ಈ ಸಮಯದಲ್ಲಿ ಸಂಘವು ಅನೇಕ ಆಘಾತಗಳನ್ನು ಸಹಿಸಬೇಕಾಯಿತು. ಸ್ವಾಮಿ ಶಾರದಾನಂದರು ತಮ್ಮ ಪಾಂಚಭೌತಿಕ ಶರೀರವನ್ನು ತ್ಯಜಿಸಿ ನಿತ್ಯಧಾಮವನ್ನೈದಿದ್ದರು (ಆಗಸ್ಟ್ ೧೯, ೧೯೨೭). ೨೬ ಸುದೀರ್ಘ ವರ್ಷಗಳು ಅವರು ರಾಮಕೃಷ್ಣ ಸಂಘದ ಕಾರ್ಯದರ್ಶಿಯಾಗಿದ್ದು ಗುರುತರ ಜವಾಬ್ದಾರಿಯನ್ನು ತಮ್ಮ ಹೆಗಲ ಮೇಲೆ ಹೊತ್ತಿದ್ದರು. ಶ್ರೀಮಾತೆಯವರ ತಿರೋಧಾನದ ನಂತರ ಶಾರದಾನಂದರೇ ಸಾವಿರಾರು ಭಕ್ತ ನರ-ನಾರಿಯರಿಗೆ ತಾಯಿಯ ಪ್ರೀತಿಯನ್ನಿತ್ತು ತೃಪ್ತಿಪಡಿಸುತ್ತಿದ್ದರು. ಅವರ ಅಂತರ್ಧಾನವು ಮಠ ಮತ್ತು ಮಿಷನ್ನಿನಲ್ಲಿ ದೊಡ್ಡ ಶೂನ್ಯತೆಯನ್ನೇ ಸೃಜಿಸಿದ್ದು ಸ್ವಾಭಾವಿಕ. ಸ್ವಾಮಿ ಶುದ್ಧಾನಂದರು ಹೊಸ ಕಾರ್ಯದರ್ಶಿಗಳಾಗಿ ನೇಮಕಗೊಂಡಿದ್ದರು.

ವಿರಜಾನಂದರು ವ್ಯಕ್ತಿಗತವಾಗಿ ಶರತ್ ಮಹಾರಾಜರಿಗೆ ಮಹಾಋಣಿ. ವರಾಹನಗರದ ಸಮಯದಿಂದಲೂ, ಜೀವನದ ವಿವಿಧ ಅವಸ್ಥೆಗಳಲ್ಲಿ ಸಮುದ್ರದಂತೆ ಪ್ರಶಾಂತರಾದ, ಸಹನಾಮೂರ್ತಿಯಾದ ಶಾರದಾನಂದರಿಂದ ಅಕೃಪಣ ಸ್ನೇಹ, ಸಹಾನುಭೂತಿ, ಸದುಪದೇಶಗಳನ್ನು ಪಡೆದಿದ್ದರು. ಸ್ವಾಮೀಜಿಯವರ ತಿರೋಧಾನದಿಂದ ವ್ಯಥಿತರಾಗಿ ವಿರಜಾನಂದರು ಎಲ್ಲ ಕೆಲಸದಿಂದ ನಿವೃತ್ತರಾಗಿ ಸಾಧನೆಯಲ್ಲಿ ಮುಳುಗುವ ಮನಸ್ಸು ಮಾಡಿದ್ದಾಗ ಶಾರದಾನಂದರು ಅವರಿಗೊಂದು ಪತ್ರ ಬರೆದಿದ್ದರು:

ಬೇಲೂರು ಮಠ

೨೮.೧೧.೧೯೦೭

ಶ್ರೀಮಾನ್ ಕಾಳೀಕೃಷ್ಣ,

ನಿನಗೆ ಸಾಧನೆ ಮಾಡಲು ಇಚ್ಛೆ ಎಂಬುದನ್ನು ತಿಳಿದು ತುಂಬ ಸಂತೋಷವಾಯಿತು, ಸ್ವಲ್ಪ ಕಾಲ ಹಾಗೆ ಮಾಡುವುದು ಎಲ್ಲರಿಗೂ ಆವಶ್ಯಕವೇ. ಇಲ್ಲದಿದ್ದಲ್ಲಿ ಸರಿಯಾದ ಕರ್ಮ ಮಾಡಲಾಗುವುದಿಲ್ಲ. ಅಲ್ಲದೆ ಕರ್ಮ ಮಾಡುತ್ತ ಮಾಡುತ್ತ ಸ್ವಲ್ಪ ಕಾಲ ಸಾಧನೆ

ಮಾಡುವುದರಿಂದ ಉಪಕಾರವೇ ಆಗುತ್ತದೆ. ಶೀಘ್ರವೇ ನಿನ್ನ ಮನೋರಥ ಸಿದ್ಧಿಸಲಿ ಎಂಬುದೇ ನಮ್ಮೆಲ್ಲರ ಮನದಾಸೆ. ಆದರೆ ೩-೪ ವರ್ಷಗಳ ತಪಸ್ಸು ದೀರ್ಘವಾಯಿತು. ಹಠ ಮಾಡಬೇಡ. ಪ್ರಾರಂಭಿಸು, ತದನಂತರ ಕೆಲವು ದಿನಗಳಲ್ಲಿ ಇದರ ಬೇರೆ ರೂಪ ವನ್ನು ಭಗವಂತನೇ ತಿಳಿಸಿಕೊಡುತ್ತಾನೆ.... ಸ್ವಂತ ಮುಕ್ತಿಯನ್ನು ಬಯಸುವುದಕ್ಕಿಂತ 'ಎಲ್ಲರೂ ಮುಕ್ತರಾಗುವವರೆಗೆ ನನಗೂ ಮುಕ್ತಿ ಬೇಡ' ಎಂಬ ಭಾವನೆ ಅತಿ ಶ್ರೇಷ್ಠವಾದುದು, ಎಂಬುದ ರಲ್ಲಿ ಸಂದೇಹವಿದೆಯೇನು?.....

ಇತಿ ಶುಭಾಕಾಂಕ್ಷಿ,
ಶಾರದಾನಂದ

ಮಾಯಾವತಿ ಆಶ್ರಮದ ಜವಾಬ್ದಾರಿಯನ್ನು ಶಾರದಾ ನಂದರೇ ವಿರಜಾನಂದರಿಗೆ ವಹಿಸಿದ್ದರು. ಆದರೆ ಇವರು ಅತ್ಯ ಧಿಕವಾಗಿ ಪರಿಶ್ರಮ ವಹಿಸುತ್ತಿದ್ದಾರೆಂಬುದನ್ನು ತಿಳಿದಾಗ ಚಿಂತಿತ ರಾಗಿ ಹೀಗೆಂದು ಪತ್ರ ಬರೆದಿದ್ದರು (ಕೊಲ್ಕತ್ತ ೨೮.೮.೧೯೦೮):

''ಶ್ರೀಮಾನ್ ಕಾಳಿ,

....ನಿನ್ನಲ್ಲಿ ನನ್ನದೊಂದು ಸವಿನಯ ಕೋರಿಕೆ. ನೀನು over work (ಅತ್ಯಧಿಕ ಪರಿಶ್ರಮ) ಮಾಡಿ ನಿನ್ನ ಆರೋಗ್ಯವನ್ನು ಹಾಳುಗೆಡಹಬೇಡ. ನೀನಿಲ್ಲದಿದ್ದರೆ ಮಾಯಾವತಿಯ ಆಶ್ರ ಮವು ಮುಚ್ಚಿ ಹೋಗುವುದಂತೂ ಖಂಡಿತ. ಸ್ವರೂಪ್, ಖಗೇನ್ ಗತಿಸಿದ್ದರಿಂದ ಆಶ್ರಮಕ್ಕಾದ ನಷ್ಟವನ್ನು ನೀನು ನೋಡುತ್ತಿರುವೆ ಯಷ್ಟೆ....''

ಆಶ್ರಮವಾಸಿಗಳ ಮುಂದೆ ಉಗ್ರಸಂಯಮದ ಜೀವನವನ್ನು ಆದರ್ಶವಾಗಿರಿಸಿದರೆ ಎಲ್ಲರಿಗೂ ಅದನ್ನನುಸರಿಸುವುದು ಕಷ್ಟ ವಾಗುವುದು. ಇದರಿಂದಾಗಿ ಯಾರೂ ಆಶ್ರಮದಲ್ಲಿರಲು ಬಯ ಸುವುದಿಲ್ಲ. ಆದ್ದರಿಂದ ಮಧ್ಯಪಂಥವೇ ಶ್ರೇಯಸ್ಕರ ಎಂಬುದ ನ್ನೊಮ್ಮೆ ಶಾರದಾನಂದರು ವಿರಜಾನಂದರಿಗೆ ತಿಳಿಸಿದ್ದರು. ಮಾಯಾವತಿಯ ಆಶ್ರಮವಾಸಿಗಳೊಂದಿಗೆ ಹೇಗೆ ವರ್ತಿಸ ಬೇಕೆಂಬುದರ ಬಗ್ಗೆ ತಿಳಿಹೇಳುತ್ತ ಹೀಗೆಂದು ಪತ್ರ ಬರೆದಿದ್ದರು (ಕೊಲ್ಕತ್ತ ೨೨.೯.೧೪):

''ನಾವು ಎಷ್ಟರಮಟ್ಟಿಗೆ ಶಾರೀರಿಕ ಕಷ್ಟವನ್ನನುಭವಿಸಿದ್ದೇವೋ ಅಥವಾ ಅನುಭವಿಸಲು ಸಾಧ್ಯವಾಗಿತ್ತೋ ಅಷ್ಟನ್ನು ನಾನು ನೋಡಿದಂತೆ ನೀವುಗಳು ಸಹಿಸಲಾಗಲಿಲ್ಲ. ಅಲ್ಲದೆ ನೀವುಗಳು ಸಹಿಸಿದಷ್ಟನ್ನು ನಿಮ್ಮ ನಂತರ ಬಂದ ಸಂನ್ಯಾಸಿ ಬ್ರಹ್ಮಚಾರಿಗಳು ಸಹಿಸಲಾಗುತ್ತಿಲ್ಲ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಅವರೊಂ ದಿಗೆ ವರ್ತಿಸು. ನೀವುಗಳು ಕಷ್ಟ ಸಹಿಸಿದ್ದೀರಿ ಅಥವಾ ಈಗಲೂ ಸಹಿಸಬಲ್ಲಿರಿ ಎಂದು ಹೇಳಿ, ಈಗಿನವರೂ ಸಹಿಸಬಲ್ಲರು ಎಂದು ಭಾವಿಸಬೇಡ.''

೧೯೨೯ರಲ್ಲಿ ಸಂಘವು ತನ್ನ ಪರಿಚಾಲನೆಗೆ ಸಂಬಂಧಪಟ್ಟ ಅನೇಕ ವಿಷಯಗಳಲ್ಲಿ ಗೊಂದಲಕ್ಕೀಡಾಯಿತು; ಅನೇಕ ಮೊಕ ದ್ದಮೆಗಳನ್ನು ಎದುರಿಸಬೇಕಾಯಿತು. ವಿರಜಾನಂದರು ಈ ಸಮಯದಲ್ಲಿ ಸ್ವಾಮಿ ಶುದ್ಧಾನಂದರ ಸಹಾಯಕ್ಕಿದ್ದು ತಮ್ಮ ಸ್ವಭಾವ ಸುಲಭ ಸ್ಥಿತಪ್ರಜ್ಞೆ ಮತ್ತು ಸಹಿಷ್ಣುತೆಯಿಂದ ಎಲ್ಲ ತೊಂದರೆಗಳನ್ನು ಎದುರಿಸಿದ್ದರು. ೧೯೨೯ರ ಜುಲೈ ೧೮ರಂದು ವಿರಜಾನಂದರು ಬಾಗ್‌ಬಜಾರಿನ ಮಠ ಮತ್ತು ನಿವೇದಿತಾ ವಿದ್ಯಾ ಲಯವನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಹೊರಬೇಕಾ ಯಿತು. ಇವರಿಗೆ ಸಹಾಯಕರಾಗಿ ಸ್ವಾಮಿ ಆತ್ಮಬೋಧಾನಂದ ರಿದ್ದರು. ವಿರಜಾನಂದರು ಬಾಗ್‌ಬಜಾರಿನ ಉದ್ಬೋಧನ ಕಟ್ಟಡ ದಲ್ಲೇ ಇರುತ್ತಿದ್ದರು.

೧೯೩೦ರ ಮಾರ್ಚ್ ತಿಂಗಳಲ್ಲಿ ಸ್ವಾಮಿ ಶುದ್ಧಾನಂದರು ತಮ್ಮ ಅನಾರೋಗ್ಯದ ನಿಮಿತ್ತ ಮಠ ಮತ್ತು ಮಿಷನ್ನಿನ ಕಾರ್ಯದರ್ಶಿ ಕೆಲಸದಿಂದ ಒಂದು ವರ್ಷದ ರಜೆಯನ್ನು ಪಡೆದರು. ಆಗ ವಿರಜಾನಂದರೇ ಹಂಗಾಮಿ ಕಾರ್ಯದರ್ಶಿಗಳಾಗಿ ನೇಮಿಸ ಲ್ಪಟ್ಟರು. ಹಲವು ಬಾರಿ ಅವರು ಪ್ರತಿದಿನವೂ ಬೆಳಗ್ಗೆ ಅಥವಾ ಸಂಜೆ ಬೇಲೂರು ಮಠಕ್ಕೆ ಹೋಗಿ ನಾನಾ ಕೇಂದ್ರಗಳ ಕೆಲಸ ಕಾರ್ಯಗಳ ಬಗ್ಗೆ ವ್ಯವಸ್ಥೆ ಮಾಡಿ ಬರಬೇಕಾಗುತ್ತಿತ್ತು. ಆಗಾಗ ನಿವೇದಿತಾ ವಿದ್ಯಾಲಯಕ್ಕೆ ಹೋಗಿ, ಅಲ್ಲಿಯ ಮಹಿಳಾ ಸೇವಾ ವ್ರತಿಗಳಿಗೆ ತಕ್ಕ ಉಪದೇಶ, ಉತ್ಸಾಹವನ್ನು ನೀಡುತ್ತಿದ್ದರು. ನಿವೇ ದಿತಾ ವಿದ್ಯಾಲಯ ಸ್ಥಾಪನೆ ಮತ್ತು ಪ್ರಚಾರದಲ್ಲಿ ನಿವೇದಿತೆಗೆ ಬಹು ದೀರ್ಘಕಾಲ ಸಹಕರಿಸಿದ್ದ, ಸ್ವಾಮೀಜಿಯವರ ಮತ್ತೊಬ್ಬ ಶಿಷ್ಯೆಯಾದ ಸಿಸ್ಟರ್ ಕ್ರಿಸ್ಟೀನ್ ೧೯೩೦ರ ಮಾರ್ಚ್ ೨೭ರಂದು ಅಮೆರಿಕದಲ್ಲಿ ದಿವಂಗತರಾದರು ಎಂಬ ಸುದ್ದಿ ನ್ಯೂಯಾರ್ಕ್‌ನ ತಂತಿಯೊಂದರಿಂದ ತಿಳಿದುಬಂತು. ಏಪ್ರಿಲ್ ೮ರಂದು ಆ ವಿದ್ಯಾ ಲಯದಲ್ಲಿ ಈ ಮಹಾವ್ರತಧಾರಿಣಿಯ ಸ್ಮರಣಾರ್ಥವಾಗಿ ಸಭೆ ಯೊಂದನ್ನು ಕರೆಯಲಾಗಿತ್ತು. ವಿರಜಾನಂದರು ಮಿಸ್ ಮ್ಯಾಕ್ಲಿ ಯಾಡ್‌ನೊಂದಿಗೆ ಆ ಸಭೆಯಲ್ಲಿ ಉಪಸ್ಥಿತರಿದ್ದು ತಮ್ಮ ಶ್ರದ್ಧೆ ಯನ್ನು ನಿವೇದಿಸಿದರು.

ವಿರಜಾನಂದರು ಈ ಸಮಯದಲ್ಲಿ ಯಾವಾಗಲಾದರೊಮ್ಮೆ ಶ್ಯಾಮ್ ಬಜಾರಿನ 'ದೇಶಬಂಧು ಪಾರ್ಕ್'ನಲ್ಲಿ ಸುತ್ತಾಡಿ ಬರು ತ್ತಿದ್ದರು. ನಂತರ ಉದ್ಬೋಧನ ಮಠದಲ್ಲಿ ಒಂದೂವರೆ ಗಂಟೆಗಳ ಕಾಲ ಧ್ಯಾನದಲ್ಲಿ ತೊಡಗುತ್ತಿದ್ದರು. ಒಮ್ಮೊಮ್ಮೆ 'ರಾಮಕೃಷ್ಣ ವಚನವೇದ'ದ ಕರ್ತೃವಾದ ಆದರಣೀಯ ಮಾಸ್ಟರ್ ಮಹಾ ಶಯರನ್ನು ಭೇಟಿಯಾಗಿ ಬರುತ್ತಿದ್ದರು. ವಿರಜಾನಂದರು ವರಾಹ ನಗರದ ಮಠದ ಬಗ್ಗೆ ಮತ್ತು ಶ್ರೀರಾಮಕೃಷ್ಣರ ಸಂನ್ಯಾಸಿ ಶಿಷ್ಯರ ಬಗ್ಗೆ ಮೊದಲು ತಿಳಿದದ್ದು ಅವರಿಂದಲೇ. ಆದ್ದರಿಂದ ಮಾಸ್ಟರ್ ಮಹಾಶಯರೆಂದರೆ ವಿರಜಾನಂದರಿಗೆ ಬಹಳ ಕೃತಜ್ಞತೆ ಹಾಗೂ ಅಸೀಮ ಶ್ರದ್ಧೆ. ಜುಲೈ ೧೫ರಂದು (೧೯೩೦) ಅವರ ೭೭ನೇ ಜನ್ಮದಿನದ ಪ್ರಯುಕ್ತ ಮಠದಿಂದ ೪೫ ಮಂದಿ ಸಂನ್ಯಾಸಿ- ಬ್ರಹ್ಮಚಾರಿಗಳೊಂದಿಗೆ ವಿರಜಾನಂದರು ಅವರನ್ನು ಭೇಟಿಯಾಗಿ, ನಮಸ್ಕರಿಸಿ ಬಂದಿದ್ದರು.

*(ಮುಂದುವರಿಯುವುದು)*

# ಅಧ್ಯಾತ್ಮ ಚಿಂತನೆ

ಕೃಷ್ಣಮೂರ್ತಿ ಕೆ. ಎಸ್.



ಮಾನವನು ಸಸ್ಯದಂತೆ ಹುಟ್ಟಿ, ಬದುಕಿ, ಜೀವನ ನಡೆಸಿ ಸತ್ತರೆ ಅದರಿಂದ ಸಾರ್ಥಕವೇನು? ಅವನ ಬಾಳು ಅರ್ಥಪೂರ್ಣವಾಗುವುದು ಆಧ್ಯಾತ್ಮಿಕ ಚಿಂತನೆ ಹಾಗೂ ಉನ್ನತ ಬಗೆಯ ಜೀವನದಿಂದ. ಇಂಥ ಬದುಕಿಗೆ ಪೂರಕವಾದ ಚಿಂತನೆಗಳನ್ನು ಹರಿಸಿದ ಲೇಖಕರು ಉತ್ತಮ ಬರಹಗಾರರು. ಪ್ರಸ್ತುತ ಮೈಸೂರಿನಲ್ಲಿ ವಾಸವಾಗಿದ್ದಾರೆ.

ಜಗತ್ತಿನಲ್ಲಿ ಪಂಚಭೂತಗಳಾದ ಭೂಮಿ, ನೀರು, ವಾಯು, ಅಗ್ನಿ, ಆಕಾಶ ಇವುಗಳ ಸೃಷ್ಟಿಕರ್ತನಾದ ದಿವ್ಯಶಕ್ತಿಯನ್ನು ಪರಬ್ರಹ್ಮ ಎಂದು ಸಂಬೋಧಿಸುತ್ತಾರೆ. ಪ್ರಪಂಚದ ವಿವಿಧ ಜನಾಂಗ, ವಿವಿಧ ದೇಶ, ವಿವಿಧ ಧರ್ಮಗಳು ಈ ದಿವ್ಯ ಶಕ್ತಿಯನ್ನು ನಾನಾ ಹೆಸರಿನಿಂದ ಕರೆಯುತ್ತಾರೆ. ಆಧ್ಯಾತ್ಮ ಜ್ಞಾನವು, ಎಲ್ಲಾ ದೇಶ, ಎಲ್ಲಾ ಜನಾಂಗಕ್ಕೂ ಆವಶ್ಯಕ. ಧರ್ಮದ ಮೂಲ ಉದ್ದೇಶ ಬದುಕಿನ ನೀತಿ, ರೀತಿ, ಸದುದ್ದೇಶದ ಜೀವನ ಮಾರ್ಗವನ್ನು ರೂಪಿಸುವಂತಿರಬೇಕು.

ಈ ಪಂಚಭೂತಗಳ ನೆರವಿಲ್ಲದೆ ಯಾವ ಮನುಷ್ಯನಾಗಲೀ, ಪ್ರಾಣಿ ಸಂಕುಲವಾಗಲೀ ಜೀವಿಸಲು ಆಗುವುದಿಲ್ಲ. ಈ ಪಂಚಭೂತಗಳ ಪ್ರಯೋಜನ ಯಾವುದೇ ತಾರತಮ್ಯವಿಲ್ಲದೆ ಎಲ್ಲಾ ದೇಶಬಾಂಧವರಿಗೆ, ಎಲ್ಲಾ ಜನಾಂಗಕ್ಕೆ, ಎಲ್ಲಾ ಪ್ರಾಣಿವರ್ಗಕ್ಕೆ ದೊರಕುತ್ತಿದೆ. ಅದನ್ನು ಕರುಣಿಸಿದ ದೈವೀಶಕ್ತಿಯನ್ನು ಸ್ಮರಿಸಿ ಆರಾಧಿಸುವುದು ಮನುಷ್ಯನ ಆದ್ಯ ಕರ್ತವ್ಯ . ಈ ದೈವಶಕ್ತಿಯನ್ನು ಅರಿಯುವ ಮಾರ್ಗವೇ ಆಧ್ಯಾತ್ಮ ಚಿಂತನೆಗೆ ಮೂಲ ಕಾರಣ. ನಮ್ಮ ಜೀವನದಲ್ಲಿ ಆಧ್ಯಾತ್ಮಿಕ ಚಿಂತನೆ ಆವಶ್ಯಕತೆ ಇದೆಯೇ ಅಥವಾ ಬೇಡವೇ ಎಂಬ ಜಿಜ್ಞಾಸೆ ನಮ್ಮನ್ನು ಕಾಡಬಹುದು.

ನಮ್ಮ ಎಲ್ಲಾ ಜೀವರಾಶಿಗಳ ಬೇರೆ ಬೇರೆ ಆಕಾರ, ಬಣ್ಣಗಳಿಗೆ ಮತ್ತು ಸೂರ್ಯ, ಚಂದ್ರ, ನಕ್ಷತ್ರಗಳ ಸಮೂಹ ವಿಶಾಲ ಸಾಗರಗಳ ಸೃಷ್ಟಿಗೆ ಭಗವಂತನ ಅದ್ಭುತ ಶಕ್ತಿಯೇ ಕಾರಣ. ಈ ಶಕ್ತಿಯನ್ನೇ ನಾವು ದೇವರು, ಸೃಷ್ಟಿಕರ್ತ, ಪರಬ್ರಹ್ಮ ಎಂಬ ಅನೇಕ ಹೆಸರುಗಳಿಂದ ಕರೆಯುತ್ತೇವೆ.

ಮನುಷ್ಯನಿಗೂ ಪ್ರಾಣಿ ಸಂಕುಲಕ್ಕೂ ಅನೇಕ ಸಾಮ್ಯತೆಯಿದ್ದರೂ ಮನುಷ್ಯನಿಗೆ ವಿಚಾರಶೀಲತೆ, ಚಿಂತನೆಯ ಶಕ್ತಿ ಎಂಬುದು ಇದೆ. ನಮಗೆ, 'ಹೇಗೆ ಈ ಮನುಷ್ಯ ಜನ್ಮ ತಾಳಿದೆವು? ಹಿಂದಿನ ಜನ್ಮವಿತ್ತೆ? ಮುಂದೆ ನಮಗೆ ಪುನರ್ಜನ್ಮವಿದೆಯೆ?' ಎಂಬ ಜಿಜ್ಞಾಸೆ ಮೂಡುವುದು ಸಹಜ. ದೇವರು ಎಲ್ಲಿದ್ದಾನೆ, ಆತ್ಮ ಮತ್ತು ಪರಮಾತ್ಮ ಎಲ್ಲಿರುತ್ತಾನೆ ಎಂಬ ತರ್ಕವು ಮನಸ್ಸಿಗೆ ಬರುತ್ತದೆ.

ಮನುಷ್ಯನ ಜೀವನದಲ್ಲಿ ಕಷ್ಟ ಸುಖ, ಸಂತೋಷ, ಏಳು ಬೀಳುಗಳನ್ನು ನಾವು ಅನುಭವಿಸುತ್ತೇವೆ. ಈ ಮನುಷ್ಯ ಜನ್ಮದಿಂದ ಪುನಃ ಪುನಃ ಜನ್ಮ ತಳೆಯುವುದನ್ನು ಕೊನೆಗೊಳಿಸಿ, ಹುಟ್ಟು ಸಾವಿನಿಂದ ಮುಕ್ತಿಯನ್ನು ಪಡೆದು, ಪರಮಾತ್ಮನ ದಿವ್ಯ ಸನ್ನಿಧಿಗೆ, ಆ ಅವ್ಯಕ್ತ ಶಕ್ತಿಯ ಮೂಲಕ್ಕೆ ಸೇರಬಯಸುವ ಇಚ್ಛೆಯನ್ನು ಹೊಂದಿ, ಅಧ್ಯಾತ್ಮ ಜೀವನವನ್ನು ಹೇಗೆ ನಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳಬೇಕು ಎಂದು ನಾವು ಅಧ್ಯಾತ್ಮದತ್ತ ಮನಸ್ಸು ಮಾಡಬೇಕು.

ನಮ್ಮ ಜೀವನದಲ್ಲಿ ಅತ್ಯಾಸೆ ಮತ್ತು ಪ್ರಲೋಭನೆಗಳು, ಬಹಳ ಪ್ರಭಾವ ಬೀರುತ್ತವೆ. ಈ ಪ್ರೇರಣೆಯೇ ಅತಿಯಾದ ಆಸೆಗಳನ್ನು ತೀರಿಸಿಕೊಳ್ಳಲು, ಮಾನಸಿಕ ದೈಹಿಕ ಶ್ರಮಪಡುವುದಕ್ಕೆ ಕಾರಣವಾಗುತ್ತದೆ. ವಸ್ತುಗಳ ಕೊಳ್ಳುವಿಕೆಯ ಒಂದು ಆಸೆ ಪೂರ್ಣಗೊಂಡರೆ ಮತ್ತೊಂದು ಆಸೆ ಬೆನ್ನು ಹತ್ತುತ್ತದೆ. ಹೀಗೆ ಆಸೆಗೆ ಕೊನೆಯೆಂಬುದೇ ಇರುವುದಿಲ್ಲ.

ಭಕ್ತಿಯೋಗವು ಭಗವಂತನನ್ನು ಅರಿಯಲು, ವಿಶೇಷವಾಗಿ ದೇವರ ನಾಮಸ್ಮರಣೆ ಮಾಡುವ ಮೂಲಕ ದೇವರನ್ನು ನೆನೆಯಲು ಇರುವ ವಿಧಾನ. ಇದು ಮಾನಸಿಕ ನೆಮ್ಮದಿ ಪಡೆಯಲು ಕಾರಣವಾಗುತ್ತದೆ. ದೇವರನ್ನು ಸಾಕ್ಷಾತ್ಕಾರ ಮಾಡಿಕೊಂಡವರಲ್ಲಿ ಪುರಂದರದಾಸರು, ಕನಕದಾಸರನ್ನು ನಾವು ಇಲ್ಲಿ ಉದಾಹರಣೆಯಾಗಿ ತೆಗೆದುಕೊಳ್ಳಬಹುದು.

ಆಧ್ಯಾತ್ಮಿಕ ಜ್ಞಾನದಿಂದ ಲೌಕಿಕ ಸುಖ ಸಂಪತ್ತಿನ ವ್ಯಾಮೋಹವನ್ನು ಕಡಿಮೆ ಮಾಡಿಕೊಳ್ಳಬಹುದು. ದಾನದಿಂದ ಆನಂದವನ್ನು ಪಡೆದ ಶ್ರೇಷ್ಠದಾಸರಲ್ಲಿ ಶ್ರೀನಿವಾಸನಾಯಕರು ನವಕೋಟಿ ನಾರಾಯಣ, ತದನಂತರ ಪುರಂದರದಾಸರಾದ ಬಗೆಯನ್ನು ನಾವು ನೆನಪಿಗೆ ತೆಗೆದುಕೊಳ್ಳಬಹುದು.

ಅಧ್ಯಾತ್ಮ ಚಿಂತನೆಯ, ಅಧ್ಯಾತ್ಮ ಜೀವನದ ಮೊದಲ ಮೆಟ್ಟಿಲು ಅಹಿಂಸಾ ಮಾರ್ಗವನ್ನು ಅನುಸರಿಸುವುದು. ನಮ್ಮ ಸಂತೋಷಕ್ಕೆ, ಸುಖಕ್ಕೆ ಬೇರೊಂದು ಪ್ರಾಣಿ, ಪಕ್ಷಿ, ಮನುಷ್ಯರಿಗೆ ಹಿಂಸೆ, ನೋವು, ಹತ್ಯೆಯನ್ನು ಮಾಡದೆ ಇರುವುದು; ದೀನದಲಿತರ ಸೇವೆಯನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದು; ದಾನ ಧರ್ಮವನ್ನು ಮಾಡುವುದು. ಆಧ್ಯಾತ್ಮಿಕ ಜೀವನದ ಮಾರ್ಗವನ್ನು ನಾವು ಕೆಳಕಂಡಂತೆ ಚಿಂತಿಸಿ, ಅಳವಡಿಸಿಕೊಂಡರೆ ಸಾರ್ಥಕ ಜೀವನನ್ನು ನಡೆಸಬಹುದು.

**ಜಪ:** ದೇವರ ನಾಮವನ್ನು ಪುನಃ ಪುನಃ ಉಚ್ಚರಿಸುವುದೇ ಜಪ. ಒಂದು ಆಕೃತಿಯನ್ನು ಮನಸ್ಸಿನಲ್ಲಿ ನೆನಪಿಸಿಕೊಂಡು ಮನಸ್ಸನ್ನು ಕೇಂದ್ರಿಕರಿಸುವುದೇ ಧ್ಯಾನ. ಧ್ಯಾನ ಮಾಡುವಾಗ ಚಿಂತನೆ ಪ್ರಧಾನವಾದದ್ದು; ಜಪ ಮಾಡುವಾಗ ಉಚ್ಚಾರ ಪ್ರಧಾನವಾಗಿರುತ್ತದೆ. ಜಪವನ್ನು ಎಣಿಸುತ್ತಿರಬೇಕು.

**ಧ್ಯಾನ:** ನಮ್ಮ ನಿತ್ಯ ಜೀವನದಲ್ಲಿ ಧ್ಯಾನವನ್ನು ಅಳವಡಿಸಿಕೊಳ್ಳುವುದು ನಮ್ಮ ಶ್ರೇಯಸ್ಸಿಗೆ ಮೊದಲ ಸೋಪಾನವಾಗಿರುತ್ತದೆ. ನಮ್ಮ ನಿತ್ಯ ಜೀವನದ ಸಂಸಾರಿಕ ಜಂಜಾಟದಿಂದ ಕೆಲವು ಸಮಯವಾದರೂ ಬಿಡುಗಡೆಯನ್ನು ಪಡೆಯುವುದು ಮಾನಸಿಕ ಆರೋಗ್ಯದ ದೃಷ್ಟಿಯಿಂದ ಆವಶ್ಯಕವಾಗಿರುತ್ತದೆ. ಧ್ಯಾನವನ್ನು ನಾವು ಯಾವಾಗ ಬೇಕಾದರೂ ಮಾಡಬಹುದು. ಆದರೂ ಧ್ಯಾನಕ್ಕೆ ಉತ್ತಮ ಸಮಯವೆಂದರೆ ಪ್ರಾತಃಕಾಲ ಮತ್ತು ಸಂಜೆ ಸಮಯ. ಉತ್ತಮ ಧ್ಯಾನ ಮಾಡುವಾಗ ನಮ್ಮ ಲೌಕಿಕ ಆಸೆ, ಆಕಾಂಕ್ಷೆಗಳನ್ನು, ಪ್ರಾಪಂಚಿಕ ಆಗು-ಹೋಗುಗಳ ಸಮಸ್ಯೆಗಳನ್ನು ನಮ್ಮ ಮನಸ್ಸಿನಿಂದ ದೂರವಿರಿಸಬೇಕು.

**ತಪ:** ಜಪವು ಕೆಲವೇ ನಿಮಿಷ ಅಥವಾ ಗಂಟೆಗಳದ್ದಾದರೆ, ನಿರಂತರ ಜಪವೇ ತಪಸ್ಸು ಎನ್ನಿಸಿಕೊಳ್ಳುತ್ತದೆ. ತಪಸ್ಸಿನ ಅವಧಿ ಗಂಟೆ, ದಿನಗಳಿಗೆ ಸೀಮಿತವಾಗಿರುವುದಿಲ್ಲ. ತಪಸ್ಸಿನ ಗುರಿಯೇ ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದು. ತಪಸ್ಸಿನ ನಿಷ್ಠೆಗೆ ಮನೋಬಲಕ್ಕೆ ಒಂದು ಉತ್ತಮ ಉದಾಹರಣೆ ಎಂದರೆ ವಾಲ್ಮೀಕಿ ಋಷಿಯ ಸಾಧನೆ. ಅವನು ತಪಸ್ಸಿಗೆ ಕೂತಾಗ ಅವನ ಸುತ್ತ ಹುತ್ತ ಬೆಳೆಯಿತು. ಹುತ್ತಕ್ಕೆ ಸಂಸ್ಕೃತದಲ್ಲಿ ವಲ್ಮೀಕ ಎಂದು ಹೆಸರು. ಅವನ ಸುತ್ತ ಹುತ್ತ ಬೆಳೆದರೂ, ಅವನಿಗೆ ದೇಹದ ಪರಿವೆಯೇ ಇಲ್ಲದ ಸ್ಥಿತಿಯನ್ನು ತಲುಪಿದ್ದು, ಆ ನಂತರ ಅವನಿಗೆ ದೇವರ ಸಾಕ್ಷಾತ್ಕಾರವಾಯಿತು. ಅವನ ಸುತ್ತ ಹುತ್ತ ಬೆಳೆದಿದ್ದ ಕಾರಣ ಅವನಿಗೆ 'ವಾಲ್ಮೀಕಿ' ಎಂಬ ಹೆಸರು ಬಂತು.

ಧ್ಯಾನ ಮಾಡುವಾಗ ಬೇರೆ ಕಡೆ ಗಮನಹರಿಸಿದೆ, ಸಿಟ್ಟು ಉದ್ವೇಗಗಳಿಗೆ ಒಳಗಾಗದೆ, ಶಾಂತ ಚಿತ್ತದಿಂದ ಇರಬೇಕು. ದೇವರು ಅಥವಾ ಭಗವಂತನೆಂದು ಕರೆಯುವ ದಿವ್ಯ ಶಕ್ತಿಯನ್ನು ಒಬ್ಬನೇ ಎಂದು ಭಾವಿಸಬೇಕು. ಧ್ಯಾನ ಮಾಡುವುದರಿಂದ ನಮ್ಮ ಮಾನಸಿಕ ಬಲ ಉತ್ತಮಗೊಳ್ಳುತ್ತದೆ, ಆತ್ಮವಿಶ್ವಾಸ ವೃದ್ಧಿಗೊಳ್ಳುತ್ತದೆ. ನಮ್ಮ ಮನಸ್ಸಿನಲ್ಲೂ ಉತ್ತಮ ಆಲೋಚನೆಗಳು ಉದ್ಭವಿಸಲು ಕಾರಣವಾಗುತ್ತದೆ. ಧ್ಯಾನ ಮಾಡುವಾಗ ನಮ್ಮ ಉಸಿರಾಟದಲ್ಲಿ ನಿಯಂತ್ರಣವಿರಬೇಕು. ನಮ್ಮ ಉಸಿರಾಟದಲ್ಲಿ ಪ್ರಾಣವಾಯು ಹೊರಗೆ ಬಿಡುವಾಗ 'ಹ' ಎಂದು ಒಳಕ್ಕೆ ಎಳೆದುಕೊಳ್ಳುವಾಗ 'ಸ' ಎಂದೂ ಉಚ್ಚರಿಸಬೇಕು. ಹ ಮತ್ತು ಸ ಮಧ್ಯೆ ಅಂ ಸೇರಿದರೆ 'ಹಂಸ' ಎಂದಾಗುತ್ತದೆ. ಒಬ್ಬ ಮನುಷ್ಯನು ಒಂದು ದಿನಕ್ಕೆ ೨೧,೬೦೦ ಬಾರಿ ಉಸಿರಾಡುತ್ತಾನೆ. ನಾವು ಎಷ್ಟು ದೀರ್ಘವಾಗಿ ಉಚ್ಛ್ವಾಸ, ನಿಶ್ವಾಸ ಮಾಡುತ್ತೇವೆಯೋ ಅಷ್ಟೇ ಆರೋಗ್ಯ ಉತ್ತಮವಾಗುತ್ತದೆ. ದೇವರಲ್ಲಿ ಈಶ್ವರ, ವಿಷ್ಣು, ಬ್ರಹ್ಮ ಎಂದು ಭೇದಭಾವ ಎಣಿಸಬಾರದು. 'ವಿಷ್ಣುಶ್ಚ ಹೃದಯಂ ಶಿವ, ಶಿವಶ್ಚ ಹೃದಯಂ ವಿಷ್ಣು' ಎಂದು ಹೇಳುತ್ತೇವೆ. ಎಲ್ಲಾ ದೇವರೂ ಒಂದೇ. ಪ್ರತಿದಿನವೂ ಸೂರ್ಯದರ್ಶನ, ಸೂರ್ಯನಿಗೆ ನಮಸ್ಕಾರ ಮಾಡಬೇಕು. ಸೂರ್ಯನನ್ನು ಪ್ರಾತಃಕಾಲದಲ್ಲಿ ಸವಿತೃ ದೇವತೆಯಾಗಿ, ಮಧ್ಯಾಹ್ನ ಗಾಯತ್ರಿದೇವಿಯಾಗಿ ಸಾಯಂಕಾಲ ಸರಸ್ವತಿ ದೇವಿಯಾಗಿ ಭಾವಿಸಿಕೊಂಡು ಪ್ರಾರ್ಥನೆ ಮಾಡಬೇಕು.

ಸೂರ್ಯೋಪಾಸನೆಯಿಂದ ನಮ್ಮ ಆಯಸ್ಸು, ಆರೋಗ್ಯ, ಬುದ್ಧಿ ವೃದ್ಧಿಯಾಗುತ್ತದೆ. ಜೀವನದಲ್ಲಿ ಪ್ರಾಪಂಚಿಕ ಸುಖವು ಬೌದ್ಧಿಕ ಪ್ರಚೋದನೆ ನೀಡಿದರೆ ದೈವೀ ಸುಖವು ಆತ್ಮಪ್ರಚೋದನೆ, ಆತ್ಮಾನಂದವನ್ನು ನೀಡುತ್ತದೆ. ಮಾಘಮಾಸವು ಸೂರ್ಯ ಆರಾಧನೆಗೆ ಪ್ರಶಸ್ತವಾದ ಮಾಸ.

ಲಲಿತಾ ಸಹಸ್ರನಾಮಾವಳಿಯಲ್ಲಿ 'ಜ್ಞಾನದಾಯೈ ನಮಃ ಜ್ಞಾನವಿಗ್ರಹಾಯೈ ನಮಃ ಸರ್ವವೇದಾಂತ ಸಂವೇದ್ಯಾಯ ನಮಃ' ಎಂಬ ಪ್ರಾರ್ಥನೆಯಿದೆ. ಜ್ಞಾನವೆಂದರೆ ಜ್ಞಪ್ತಿ ಎಂದರ್ಥ. ವಿದ್ಯೆಯು ಒಂದು ಪರಿಮಿತಿಯನ್ನು ಹೊಂದಿರುತ್ತದೆ. ಆದರೆ ಜ್ಞಾನವು ಅಪರಿಮಿತ. ಅನಂತ ವಿದ್ಯೆಯನ್ನು ಪುನಃ ಪುನಃ ಮನನ ಮಾಡಿಕೊಳ್ಳದಿದ್ದರೆ ವಿದ್ಯೆಯು ಮರೆತು ಹೋಗಬಹುದು. ಆದರೆ ಜ್ಞಾನವು ಹಾಗೆ ಆಗುವುದಿಲ್ಲ, ಮರೆತು ಹೋಗುವುದಿಲ್ಲ.

ವಿದ್ಯೆಯ ಪರಿಣತಿಯಿಂದ ಜೀವನದಲ್ಲಿ ಅನೇಕ ಪ್ರಾಪಂಚಿಕ ಐಹಿಕ ಸುಖ, ಸೌಲಭ್ಯಗಳನ್ನು ಪಡೆಯಬಹುದು. ಇದರಿಂದ ಭೋಗಗಳಿಂದ ಇಂದ್ರಿಯಗಳ ಆಸೆ ಹೆಚ್ಚುತ್ತಾ ಹೋಗುತ್ತದೆ. ಆದರೆ ಜ್ಞಾನ ಇಂದ್ರಿಯಗಳ ಮೇಲೆ ಹತೋಟಿಯನ್ನು ಹೊಂದಿ ಇಂದ್ರಿಯಸುಖಗಳಿಂದ ದೂರವಾಗಲು ಕಾರಣವಾಗುತ್ತದೆ.ನಾವು ಅನೇಕ ಗ್ರಂಥಗಳನ್ನು ಓದುತ್ತೇವೆ. ಓದಿದ್ದನ್ನು ಅರ್ಥ ಮಾಡಿಕೊಂಡು ನಿತ್ಯಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಜ್ಞಾನಕ್ಕೆ ಸಮಾನವಾದದು ಯಾವುದೂ ಇಲ್ಲ. ಜ್ಞಾನವನ್ನು ಬೇರೊಬ್ಬರಿಗೆ ಹಂಚಿದಷ್ಟೂ ನಮ್ಮ ಜ್ಞಾನವು ಹೆಚ್ಚುತ್ತಾ ಹೋಗುತ್ತದೆ.

ಆಧ್ಯಾತ್ಮಿಕ ಜ್ಞಾನದಿಂದ ದೊರಕುವ ದೇಹಕಾಂತಿ ಶ್ರೇಷ್ಠವಾದುದು. ಹಿಂದಿನ ಕಾಲದ ಋಷಿಗಳು ಆಧ್ಯಾತ್ಮಿಕ ಜ್ಞಾನದಿಂದ ಮುಖಕಾಂತಿಯುಳ್ಳವರಾಗಿದ್ದರು. ಯಾರಿಗೂ ಕೇಡನ್ನು ಬಯಸಬಾರದು. ನಮ್ಮ ದೇಹದ ಪಂಚಕರ್ಮೇಂದ್ರಿಯಗಳ ಅಪೇಕ್ಷೆಯನ್ನು ಕಡಿಮೆ ಮಾಡಿಕೊಂಡು ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡರೆ ಮನಸ್ಸಿನ ಉದ್ವೇಗ ಕಡಿಮೆಯಾಗಿ ಮನಸ್ಸು ಸ್ಥಿರತೆ, ಪ್ರಶಾಂತಿಯನ್ನು ಪಡೆಯುತ್ತದೆ. 

# ಮಮಕಾರವೆಂಬ ಹಗ್ಗ !



ಮನುಷ್ಯನು ಎಷ್ಟು ವಸ್ತುಗಾಗಿ ಹಾಗೂ ವ್ಯಕ್ತಿಗಳ ಜೊತೆ ಸಂಬಂಧ ಮಾಡುವನೋ ಅವೆಲ್ಲವುಗಳೂ ಇವನ ಕೊರಳಿಗೆ ಹಗ್ಗ ವನ್ನು ಕಟ್ಟುತ್ತವೆ (ಅವನನ್ನು ಬಂಧಿಸುತ್ತವೆ). ಒಂದೇ ಹಗ್ಗದಿಂದ ಕಟ್ಟಲ್ಪಟ್ಟ ಪಶುವಿಗೆ ಅದರಿಂದ ಬಿಡಿಸಿಕೊಳ್ಳುವುದು ಸಾಧ್ಯವಾಗದೆ ಇರುವಾಗ, ಕಣ್ಣಿಗೆ ಕಾಣದಿರುವ ಅಹಂಕಾರ, ಮಮಕಾರಗಳೆಂಬ ಅನಂತ ಹಗ್ಗಗಳಿಂದ ಕಟ್ಟಲ್ಪಟ್ಟ ಮನುಷ್ಯನೆಂಬ ಪಶುವಿಗೆ ಮುಕ್ತಿ ಯೆಂಬುದು ಮನದ ಮಂಡಿಗೆಯೇ ಸರಿ.

ಒಮ್ಮೆ ಗುರು-ಶಿಷ್ಯರಿಬ್ಬರು ನದಿಗೆ ಸ್ನಾನಕ್ಕೆ ಹೋದಾಗ ಒಕ್ಕಲಿಗ ನೋರ್ವನು ಬಹು ಸುಂದರವಾದ ಒಂದು ಎತ್ತನ್ನು ಅದೇ ತಾನೇ ಪೇಟೆಯಿಂದ ಖರೀದಿಸಿಕೊಂಡು, ಅದರ ಕೊರಳಿಗೆ ಹಗ್ಗವನ್ನು ಬಿಗಿ ಯಾಗಿ ಕಟ್ಟಿ, ತಾನು ಮುಂದಾಗಿ ಅದನ್ನು ಹಿಡಿದುಕೊಂಡು ಹೊರಟಿದ್ದನು. ಎತ್ತು ಅವನನ್ನು ಹಿಂಬಾಲಿಸುತ್ತಿತ್ತು . ಆ ದೃಶ್ಯವನ್ನು ನೋಡಿ ಗುರುಗಳು ಶಿಷ್ಯನಿಗೆ ಪ್ರಶ್ನೆ ಮಾಡಿದರು : ''ಎತ್ತು ಹಾಗೂ ಒಕ್ಕಲಿಗ ಇವರಿಬ್ಬರೊಳಗೆ ಯಾರ ಕೊರಳಿಗೆ ಹಗ್ಗವು ಕಟ್ಟಲ್ಪಟ್ಟಿದೆ?'' ಎಂದು. ಆಗ ಶಿಷ್ಯನು, ''ಗುರುಗಳೇ! ನಿಮ್ಮ ದೃಷ್ಟಿಯು ಮಂದ ವಾಗಿದೆಯೇನು? ಎತ್ತಿನ ಕೊರಳಲ್ಲಿಯ ಹಗ್ಗವು ಕಾಣುವುದಿಲ್ಲವೆ? ಇದೂ ಅಲ್ಲದೆ ಪಶುಗಳೇ ಕಟ್ಟಲ್ಪಡುತ್ತವೆಯೇ ವಿನಃ ಮನುಷ್ಯ ರೆಂದಾದರೂ ಹಗ್ಗದಿಂದ ಕಟ್ಟಲ್ಪಡುತ್ತಾರೆಯೆ? ಹಗ್ಗವನ್ನು ಹಿಡಿದ ಒಕ್ಕಲಿಗ ಮುಂದೆ ಮುಂದೆ ಹೊರಟಿರುವನು. ಅದರಿಂದ ಕಟ್ಟಲ್ಪಟ್ಟ ಎತ್ತು ಹಿಂದೆ-ಹಿಂದೆ ಹೋಗುತ್ತಿದೆ ನೋಡಿರಿ'' ಎಂದ. ಆಗ ಗುರುಗಳು ಇವನಿಗೆ ಈಗಲೇ ಶಾಸ್ತ್ರಜ್ಞಾನ ಮಾಡಿಕೊಡಬೇಕೆಂದು ಒಕ್ಕಲಿಗನನ್ನು ಕರೆದು, ''ತಮ್ಮಾ! ಈ ಎತ್ತು ಯಾರದು?'' ಎಂದು ಪ್ರಶ್ನಿಸಿದರು. ''ಸ್ವಾಮಿ! ಇದು ನನ್ನದು, ಈಗ ತಾನೇ ಐದು ಸಾವಿರ ರೂಪಾಯಿ ಕೊಟ್ಟು ತಂದಿರುವೆನು'' ಎಂದ. ಆಗ ಗುರುಗಳು ನೋಡುವ ನೆಪದಲ್ಲಿ ಎತ್ತಿನ ಕೊರಳ ಹಗ್ಗವನ್ನು ಬಿಚ್ಚಿಬಿಟ್ಟರು. ಬಿಡುಗಡೆ ಹೊಂದಿದ ಎತ್ತು ಸಂಸ್ಕಾರ ಬಲದಿಂದ ತನ್ನ ಮೊದಲಿನ ಮನೆಯ ಕಡೆಗೆ ಓಡಹತ್ತಿತು. ಇದನ್ನು ನೋಡಿದ ಒಕ್ಕಲಿಗನು ಬೆಚ್ಚಿಬಿದ್ದು ಅದನ್ನು ಹಿಡಿಯುವುದಕ್ಕಾಗಿ ಓಡಿಹೋದ. ಎತ್ತು ಮುಂದೆ ಓಡುತ್ತಿದೆ, ಒಕ್ಕಲಿಗ ಹಿಂದೆ ಓಡುತ್ತಿದ್ದಾನೆ. ಆಗ ಗುರುಗಳು,



''ನೋಡು ಈಗ ಮುಂದೆ ಯಾರು ಇದ್ದಾರೆ? ಹಿಂದೆ ಯಾರು ಇದ್ದಾರೆ? ಯಾರ ಕೊರಳಲ್ಲಿ ಹಗ್ಗವಿದೆ?'' ಎಂದು ಪ್ರಶ್ನಿಸಿದಾಗ, ''ಗುರುಗಳೇ! ಒಕ್ಕಲಿಗನ ಕೊರಳಲ್ಲಿ ಹಗ್ಗವೇನೂ ಇಲ್ಲ, ಆದರೆ ಎತ್ತಿನ ಹಿಂದೆ ಯಾಕೆ ಓಡುತ್ತಿದ್ದಾನೆ?'' ಶಿಷ್ಯನ ಈ ಆಶ್ಚರ್ಯಕರ ವಾದ ಪ್ರಶ್ನೆಯನ್ನು ಕೇಳಿ, ''ನೋಡು ಇದೇ ಮಮಕಾರವೆಂಬ ಹಗ್ಗ'' ಎಂದು ಗುರು ತನ್ನ ಶಿಷ್ಯನನ್ನು ಎಚ್ಚರಿಸಿದರು.

ಸಂಗ್ರಹ: ಸ್ವಾಮಿ ತೀರ್ಥಕರಾನಂದ

# ಶ್ರೀಮಾತೆಯವರ ಪತ್ರಗಳು - ೧೭

ಅನುವಾದ: ಪ್ರವ್ರಾಜಿಕಾ ಧರ್ಮಪ್ರಾಣಾ

### ಪತ್ರ - ೯೫

೨೬.೬.೧೯೧೩

೧೨.೩.೨೦, ಜಯರಾಂಬಾಟಿ

ಶುಭವಾಗಲಿ.

ತಾಯಿ, ನಿನ್ನ ಪತ್ರವು ಸಿಕ್ಕಿದೆ. ನಾನು ಸದ್ಯ ಚೆನ್ನಾಗಿದ್ದೇನೆ. ಆದರೆ ಪ್ರತಿದಿನ ಸ್ನಾನ ಮಾಡಿದರೆ ಕಿವಿಯು ಸ್ವಲ್ಪ ಭಾರವಾಗುವುದು. ರಾಧು ಸಾಧಾರಣ ಯಾವತ್ತೂ ಚೆನ್ನಾಗಿರುವುದಿಲ್ಲ. ೩,೪ ದಿನ ಚೆನ್ನಾಗಿದ್ದರೆ ಮತ್ತೆ ನೋವು ಶುರುವಾಗುವುದು. ಈಚೆಗೆ ೩,೪ ದಿನಗಳಿಂದ ಸ್ವಲ್ಪ ಚೆನ್ನಾಗಿದ್ದಾಳೆ.

ನಿನಗೆ ನನ್ನ ಆಶೀರ್ವಾದ. ಚೆನ್ನಾಗಿರುವೆ ಎಂದು ಆಶಿಸುತ್ತೀನೆ.

ಇತಿ ಆಶೀರ್ವಾದ ನೀಡುತ್ತಿರುವ,

ನಿನ್ನ ಮಾತೆ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*ಶ್ರೀಮತಿ ಸರಯೂಬಾಲಾ ದೇವಿ*

*25 , Kankulia Road, Ballyganje*

*Calcatta*

### ಪತ್ರ - ೯೬

ಶ್ರೀ ಗುರು ಚರಣಂ

— ೬.೧೯೧೩; ೭ನೇ ಆಷಾಢ,

ಜಯರಾಂಬಾಟಿ

ಶುಭವಾಗಲಿ.

ಮಗೂ, ನಿನ್ನ ಪತ್ರ ಸಿಕ್ಕಿ ಎಲ್ಲವನ್ನೂ ತಿಳಿದುಕೊಂಡೆ. ರಾಧುವಿಗೆ ಸದ್ಯ ಒಬ್ಬ ಮುಸಲ್ಮಾನ್ ಫಕೀರ ಚಿಕಿತ್ಸೆ ನಡೆಸುತ್ತಿದ್ದಾನೆ. ಹಾಗೂ ಈಗ ಸ್ವಲ್ಪ ಚೆನ್ನಾಗಿದ್ದಾಳೆ. ಆದುದರಿಂದ ಈಗ ಬೇರೆ ಪ್ರಯತ್ನದ ಆವಶ್ಯಕತೆ ಇಲ್ಲ. ನಿನಗೆ ನನ್ನ ಆಶೀರ್ವಾದ. ನಿನ್ನ ವೃದ್ಧ ತಂದೆಯ ಮನಸ್ಸಿನಲ್ಲಿ ಅಸಂತೋಷ ಉಂಟುಮಾಡಬಾರದು. ಅವರು ಏನು ಹೇಳುವರೋ ಹಾಗೆಯೇ ಮಾಡುವುದು ಉಚಿತ.

ಇತಿ ಆಶೀರ್ವಾದ ಮಾಡುತ್ತಿರುವ

ನಿನ್ನ ಮಾತೆ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*Sj Surendranath Guptha*

*Barodamohan Das, West of Church , Sylhet*

### ಪತ್ರ - ೯೭

ಶ್ರೀ ಶ್ರೀ ಗುರುದೇವ ಶರಣಂ

೨೨.೭.೧೯೧೩

ಶುಭವಾಗಲಿ,

ತಾಯಿ, ನಿನ್ನ ಪತ್ರವು ಸಿಕ್ಕಿದೆ. ನಾನು ಚೆನ್ನಾಗಿದ್ದೇನೆ. ರಾಧು ೨ ದಿನ ಚೆನ್ನಾಗಿರುವಳು. ೩, ೫ ದಿನಗಳು ಅಸ್ವಸ್ಥಳಾಗುವಳು. — ಈ ರೀತಿಯಲ್ಲೇ ನಡೆಯುತ್ತಿದೆ. ಮನೆಯಲ್ಲಿ ಉಳಿದೆಲ್ಲವೂ ಕುಶಲ. ನಿನಗೆ ನನ್ನ ಆಶೀರ್ವಾದ.

೫ ನೇ ಶ್ರಾವಣ — ಜಯರಾಂಬಾಟಿ.

ಇತಿ ಆಶೀರ್ವಾದ ನೀಡುತ್ತಿರುವ,

ನಿನ್ನ ಮಾತೆ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*ಶ್ರೀಮತಿ ಸರಯೂ ಬಾಲಾ ದೇವಿ*

*25, kankulia Road*

*Ballyganj , calcatta*

### ಪತ್ರ - ೯೮

ಶ್ರೀ ಶ್ರೀ ರಾಮಕೃಷ್ಣ ಶರಣಂ

೨೭.೮.೧೯೧೩

ಮಂಗಳವಾರ, ಜಯರಾಂಬಾಟಿ

ಮಂಗಳವಾಗಲಿ,

ತಾಯಿ, ನಿನ್ನ ಪತ್ರವು ಸಿಕ್ಕಿ ಎಲ್ಲಾ ಸಮಾಚಾರ ತಿಳಿದುಕೊಂಡೆ. ನಾನು ಚೆನ್ನಾಗಿದ್ದೇನೆ. ಆಶ್ವಯುಜ ಮಾಸದಲ್ಲಿ ಕಲ್ಕತ್ತಕ್ಕೆ ಹೋಗುವ ಇಚ್ಛೆ ಇದೆ. ಆಮೇಲೆ ಠಾಕೂರರ ಇಚ್ಛೆಯಂತೆ. ನಿಮಗೆಲ್ಲಾ ನನ್ನ ಆಶೀರ್ವಾದ.

ಇತಿ ಆಶೀರ್ವಾದ ನೀಡುತ್ತಿರುವ,

ನಿಮ್ಮೆಲ್ಲರ ತಾಯಿ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*ಶ್ರೀಮತಿ ಸರಯೂಬಾಲಾ ದೇವಿ*

*25,Kankulia Road*

*Ballyganj, Calcatta*

### ಪತ್ರ - ೯೯

ಶ್ರೀ ಶ್ರೀ ದುರ್ಗಾ

೩.೯.೧೯೧೩

೧೮ನೇ ಭಾದ್ರಪದ, ಬುಧವಾರ

ಚಿರಂಜೀವಿಗೆ, ಶುಭವಾಗಲಿ.

ಮಗೂ, ನಿನ್ನ ಪತ್ರವು ಸಿಕ್ಕಿ ಸಮಾಧಾನವಾಯಿತು. ನನಗೆ

ಕಾಯಿಲೆಯಾಗಿತ್ತು. (ಈಗ) ಚೆನ್ನಾಗಿದ್ದೇನೆ. ಬಹುಶಃ ನಾನು ಮುಂದಿನ ತಿಂಗಳಲ್ಲಿ ಕಲ್ಕತ್ತಾಕ್ಕೆ ಹೋಗಬಹುದು.ಆಗ ದರ್ಶನ ಕ್ಕಾಗಿ ಬಾ. ಇಲ್ಲಿ ಎಲ್ಲವೂ ಕ್ಷೇಮ. ನಿಮ್ಮ ಮನೆಯ ಕುಶಲವನ್ನು ತಿಳಿಸಿ ನೆಮ್ಮದಿಯನ್ನು ಕೊಡು. ಇನ್ನು ಹೆಚ್ಚು ಏನು ಬರೆಯಲಿ?

ಇತಿ ಮಾತಾದೇವಿ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*Tarak Nath Roy Chowdhury*

*Sub Registrar*

*Kathiadi (Mymensingha)*

**ಪತ್ರ - ೧೦೦**

ಶ್ರೀಶ್ರೀ ದುರ್ಗಾ

೩.೯.೧೯೧೩

೧೮ನೇ ಭಾದ್ರಪದ, ಬುಧವಾರ

ಪರಮ ಶುಭದಾಯಕ ಮಾತೆ,

ನಿನ್ನ ಪತ್ರ ಸಿಕ್ಕಿ ಸಮಾಧಾನವಾಯಿತು. ನನಗೆ ಕಾಯಿಲೆ ಯಾಗಿತ್ತು. ಈಗ ಚೆನ್ನಾಗಿದ್ದೇನೆ. ಆಮೇಲೆ ತಾಯಿ, ಬಂಗಾಳಿ ಯಲ್ಲಿ ವಿಳಾಸ ಬರೆಯಬೇಕು, ಅಲ್ಲದಿದ್ದರೆ ಯಾರಿಗೂ ಓದಲು ಸಾಧ್ಯವಿಲ್ಲ. ಬಹುಶಃ ನಾನು ಮುಂದಿನ ತಿಂಗಳು ಕಲ್ಕತ್ತಕ್ಕೆ ಹೋಗ ಬಹುದು. ಮತ್ತೆ ನೀವೆಲ್ಲಾ ಹೇಗಿದ್ದೀರಿ ಎಂದು ಬರೆಯಬೇಕು. ಇಲ್ಲಿ ಕ್ಷೇಮ. ನಿನಗೆ ನನ್ನ ಆಶೀರ್ವಾದ. ಠಾಕೂರರು ನಿನಗೆ ಭಕ್ತಿ ಯನ್ನು ನೀಡುವರು.

ಇತಿ ನಿಮ್ಮೆಲ್ಲರ ತಾಯಿ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*ಶ್ರೀಮತಿ ಸರಯೂಬಾಲಾ ದೇವಿ*

*25, Kankulia Road*

*Ballygange , Calcatta*

**ಪತ್ರ - ೧೦೧**

ಶ್ರೀ ದುರ್ಗಾ

೩ನೇ ಸೆಪ್ಟೆಂಬರ್

UDBODHAN OFFICE
12, 13, Gopal Chandra Neogi Lane
Bagbazar P.O. , CALCUTTA

೧೮ನೇ ಭಾದ್ರಪದ, ಬುಧವಾರ

ಶುಭವಾಗಲಿ.

ಮಗನೆ, ನೀವೆಲ್ಲರೂ ಸುರಕ್ಷಿತವಾಗಿ ತಲುಪಿದಿರಿ ಎಂದು ಕೇಳಿ ಸಮಾಧಾನವಾಯಿತು. ಸುಧೀರಾಗೆ ತುಂಬಾ ಕಷ್ಟವಾಯಿತು ಎಂದು ಕೇಳಿ ದುಃಖವಾಯಿತು. ಏನಾದರಾಗಲಿ ಸುರಕ್ಷಿತವಾಗಿ ತಲುಪಿದಿರಿ. ಠಾಕೂರರ ಕೃಪೆಯಿಂದ ಈ ಮನೆಯಲ್ಲಿ ಎಲ್ಲರೂ ಕ್ಷೇಮ. ಅಲ್ಲಿ ಎಲ್ಲರೂ ಚೆನ್ನಾಗಿರುವರೆಂದು ಕೇಳಿ ಸಮಾಧಾನ ವಾಯಿತು. ನೀನು ಈಗ ಇಲ್ಲಿಗೆ ಬರುವ ಆವಶ್ಯಕತೆ ಇಲ್ಲ. ಈಗ ಎಲ್ಲಾ ತುಂಬಾ ಕಷ್ಟ. ಈಗ ಇಲ್ಲಿಗೆ ಬರುವ ಆವಶ್ಯಕತೆ ಇಲ್ಲ. ನಾನು ಕಲ್ಕತ್ತಕ್ಕೆ ಹೋದಾಗ ಎಲ್ಲರೂ ಆಗ ಅಲ್ಲಿಗೆ ಬನ್ನಿ. ಇನ್ನು ಹೆಚ್ಚು ಏನು ಬರೆಯಲಿ? ನಾನು ಈಗ ಸದ್ಯ ಚೆನ್ನಾಗಿದ್ದೇನೆ. ನಿಮಗೆಲ್ಲರಿಗೂ ನನ್ನ ಆಶೀರ್ವಾದ.

ಇತಿ ಶ್ರೀಮಾತೆ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*ನಿಶಿಕಾಂತ ಮಜುಮದಾರ್*

*ಬಿ ೨೧, ಡುರಾಂಡ*

*ರಾಂಚಿ ಸೆಕ್ರೆಟರಿಯೇಟ್*

**ಪತ್ರ - ೧೦೨**

೧೧.೯.೧೯೧೩

೨೫ನೇ ಭಾದ್ರಪದ, ಜಯರಾಂಬಾಟಿ

ಪರಮ ಶುಭಾಶೀರ್ವಾದ, ವಿಶೇಷವೇನೆಂದರೆ,

ನಿನ್ನ ಪತ್ರವು ಸಿಕ್ಕಿ ಸಮಾಧಾನವಾಯಿತು. ಇಲ್ಲಿ ಎಲ್ಲವೂ ಕ್ಷೇಮ. ರಾಧು, ಮಾಕು, ನಾನು ಎಲ್ಲರೂ ಚೆನ್ನಾಗಿದ್ದೇವೆ. ನೀವೆ ಲ್ಲರೂ ನನ್ನ ಆಶೀರ್ವಾದ ಸ್ವೀಕರಿಸಿ.

ಇತಿ,

ನಿನ್ನ ತಾಯಿ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*ಪರಮ ಶುಭ*

*ಶ್ರೀಮತಿ ಸರಯೂ ಬಾಲಾ ದೇವಿ*

*ನಂ. ೨೫, ಕಾಕುಲಿಯಾ ರೋಡ್ —ಬಾಲಿಗಂಜ್ ಪೋ.*

*ಕಲ್ಕತ್ತಾ*

**ಪತ್ರ ೧೦೩**

ಶ್ರೀ ಶ್ರೀ ಹರಿ

೨೨.೯.೧೯೧೩

ಜಯರಾಂ ಬಾಟಿ, ೪ನೇ ಆಶ್ವಯುಜ, ೧೩೨೦

ಶುಭವಾಗಲಿ,

ಪರಮ ಶುಭಾಶೀರ್ವಾದ, ವಿಶೇಷವೇನೆಂದರೆ ನೀನು ಕಳು ಹಿಸಿರುವ ೧೦ ರೂಪಾಯಿ ಸಿಕ್ಕಿದೆ. ಇಲ್ಲಿ ಎಲ್ಲವೂ ಕ್ಷೇಮ. ನಿಮ್ಮೆ ಲ್ಲರ ಕ್ಷೇಮಕ್ಕೆ ಬರೆ. ನೀನು ನನ್ನ ಆಶೀರ್ವಾದ ಸ್ವೀಕರಿಸು.

ಇತಿ,

ನಿನ್ನ ತಾಯಿ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*ಶ್ರೀಮಾನ್ ತಾರಕ್‌ನಾಥ್ ದೇವಶರ್ಮ ಬಾಬಾಜಿ*

*Katiadi (Mymensing )*

*ಪೋ: ಕಥಿಯಾದಿ ,ರಿಜಿಸ್ತ್ರಿ ಆಫೀಸ್ , ಮೈಮನ್‌ಸಿಂಗ್*

# ಮೃತ್ಯುವನ್ನು ಜಯಿಸುವುದು



ಮೂಲ ಹಿಂದೀ : **ಸ್ವಾಮಿ ಬ್ರಹ್ಮೇಶಾನಂದ**
ಅನುವಾದ : **ಮಾತಾ ತ್ಯಾಗಮಯೀ**

**ಪಾ**ಂಡವರು ೧೮ ವರ್ಷ ವನವಾಸದಲ್ಲಿದ್ದಾಗ ಒಂದು ಘಟನೆ ನಡೆಯಿತು. ಒಂದು ದಿನ ಕಾಡಿನಲ್ಲಿ ಸಂಚರಿಸುತ್ತಿದ್ದ ಪಾಂಡವರು ಮತ್ತು ದ್ರೌಪದಿಗೆ ಬಹಳ ದುಃಖವಾಯಿತು. ಯುಧಿಷ್ಠಿರನು ಒಬ್ಬರಾದ ಮೇಲೊಬ್ಬರಂತೆ ತನ್ನ ನಾಲ್ವರು ತಮ್ಮಂದಿರನ್ನು ನೀರು ತರಲು ಕಳುಹಿಸಿದನು. ಅವರಲ್ಲಿ ಒಬ್ಬರೂ ಬರಲಿಲ್ಲ. ಸ್ವಯಂ ಯುಧಿಷ್ಠಿರನೇ ನೀರನ್ನು ಹುಡುಕಿಕೊಂಡು ಹೋದನು. ಅಲ್ಲೊಂದು ಸರೋವರ ಕಾಣಿಸಿತು. ಅದರ ದಡದಲ್ಲಿ ನಾಲ್ವರು ತಮ್ಮಂದಿರೂ ಮೃತರಾಗಿ ಬಿದ್ದಿದ್ದರು. ಯುಧಿಷ್ಠಿರ ಬಹಳ ದುಃಖದಿಂದ ನೀರು ಕುಡಿಯಲೆಂದು ಸರೋವರದೊಳಕ್ಕೆ ಹೆಜ್ಜೆ ಹಾಕುತ್ತಲೇ ಓರ್ವ ಯಕ್ಷನ ಒಂದು ಧ್ವನಿ ಕೇಳಿಸಿತು. ತನ್ನ ಪ್ರಶ್ನೆಗಳಿಗೆ ಉತ್ತರಿಸದೆ ನೀರನ್ನು ಕುಡಿಯಬಾರದೆಂದನು ಯಕ್ಷ. ಯಕ್ಷ ಮತ್ತು ಯುಧಿಷ್ಠಿರನ ಈ ಪ್ರಶ್ನೋತ್ತರಗಳು ಮಹಾಭಾರತದಲ್ಲಿ 'ಯಕ್ಷಪ್ರಶ್ನೆ' ಎಂದು ಪ್ರಸಿದ್ಧವಾಗಿದೆ.

ಆ ಪ್ರಶ್ನೆಗಳಲ್ಲಿ ಒಂದು ಪ್ರಶ್ನೆ 'ಕಿಂ ಆಶ್ಚರ್ಯಂ?' — ಜಗತ್ತಿನಲ್ಲಿ ಎಲ್ಲಕ್ಕಿಂತ ದೊಡ್ಡ ಆಶ್ಚರ್ಯ ಯಾವುದು? ಯುಧಿಷ್ಠಿರನ ಉತ್ತರ ಬಹಳ ಪ್ರಸಿದ್ಧವಾದುದು:

**ಅಹನ್ಯಹನಿ ಭೂತಾನಿ ಗಚ್ಛಂತಿ ಯಮಮಂದಿರಮ್ ।**
**ಶೇಷಾಃ ಸ್ಥಿರತ್ವಮಿಚ್ಛಂತಿ ಕಿಮಾಶ್ಚರ್ಯಮತಃ ಪರಂ ॥**

'ದಿನದಿನವೂ ಮನುಷ್ಯರು ಯಮಸದನಕ್ಕೆ ಹೋಗುತ್ತಿದ್ದರೂ ಬದುಕಿರುವ ಮನುಷ್ಯ ನಾನು ಯಾವಾಗಲೂ ಇರುವವನು ಎಂದು ಭಾವಿಸುತ್ತಾನೆ. ಇದಕ್ಕಿಂತ ಆಶ್ಚರ್ಯ ಇನ್ನೇನಿದೆ?'

ಇದು ಎಲ್ಲಕ್ಕಿಂತ ಅಚ್ಚರಿಯ ವಿಚಾರ ಅಷ್ಟೇ ಅಲ್ಲ, ದೌರ್ಭಾಗ್ಯದ ವಿಚಾರವೂ ಹೌದು. ನಮ್ಮ ವಿಚಾರವನ್ನೇ ತೆಗೆದುಕೊಳ್ಳೋಣ. ನಾವು ದಿನವೂ ಸುತ್ತಮುತ್ತ ಜನ ತೀರಿಕೊಳ್ಳುತ್ತಿರುವುದನ್ನು ನೋಡಿಲ್ಲವೆ? ನಮ್ಮ ಬಂಧುಬಳಗ ತೀರಿಕೊಂಡಿದ್ದನ್ನು ನೋಡಿದ್ದೇವೆ. ವೃದ್ಧರಷ್ಟೇ ಅಲ್ಲ ಯುವಕರು, ಸಂಬಂಧಿಕರು, ಅಕಾಲ ಮರಣಕ್ಕೀಡಾಗಿದ್ದನ್ನು ನೋಡಿದ್ದೇವೆ. ನಾವು ಯಾರೊಂದಿಗೆ ಮಾತನಾಡಿದ್ದೆವೋ, ಹಾಸ್ಯ ಪರಿಹಾಸ್ಯ ಮಾಡಿದ್ದೆವೋ ಅವರು ಆಕಸ್ಮಿಕವಾಗಿ ರಸ್ತೆ ಅಪಘಾತದಲ್ಲಿ ಅಥವಾ ಹೃದಯಾಘಾತದಿಂದ ತೀರಿಕೊಳ್ಳುತ್ತಾರೆ. ನಮ್ಮ ಕಣ್ಮುಂದೆಯೇ ರಸ್ತೆ ಅಪಘಾತದಲ್ಲಿ ಕೆಲವರು ತೀರಿಕೊಂಡರು. ಮೃತ್ಯು ನಮ್ಮಿಂದ ಕೆಲವೇ ಗಜ ದೂರದಲ್ಲಿತ್ತು, ಕೆಲವೇ ಕ್ಷಣಗಳ ದೂರದಲ್ಲಿತ್ತು ಅಷ್ಟೇ. ನಾವೇ ಅವರ ಜಾಗದಲ್ಲಿದ್ದಿದ್ದರೆ!

ದುರ್ಘಟನೆಗಳು ಪ್ರತಿಯೊಬ್ಬರ ಜೀವನದಲ್ಲೂ ನಡೆಯುತ್ತಿರುತ್ತವೆ. ಆಸ್ಪತ್ರೆಯಲ್ಲಿ ಭರ್ತಿಯಾದಾಗ, ಯಾವುದೇ ರಸ್ತೆ ದುರ್ಘಟನೆಯಲ್ಲಿ ಹೀಗೆ ಎಷ್ಟೋ ಬಾರಿ ಮೃತ್ಯು ನಮ್ಮ ಹತ್ತಿರದಿಂದಲೇ ಸುಳಿದು ಹೋಗುತ್ತದೆ. ಎಷ್ಟೋ ಸಲ ಮೃತ್ಯು ನಮಗೆ ತನ್ನ ನೆರಳನ್ನು ತೋರಿಸಿ ಹೋಗುತ್ತದೆ. ಅದು ನಮಗೆ ತನ್ನ ನೆನಪು ಮಾಡಿಸಿ, ಒಂದು ಪಾಠ ಕಲಿಸಿಕೊಟ್ಟು ಮರೆಯಾಗುತ್ತದೆ. ತಾನೂ ಬದುಕಿನಷ್ಟೇ ಸತ್ಯ ಎಂದು ತೋರಿಸಿಕೊಟ್ಟು ಹೋಗುತ್ತದೆ. ಆದರೆ ನಾವು ಅದು ಕಲಿಸಿದ ಪಾಠವನ್ನು ಕಲಿತೆವೇನು? ನಾವು ಪ್ರಮಾದದ ನಿದ್ರೆಯಿಂದ ಎಚ್ಚೆತ್ತೆವೇನು? ಇಲ್ಲ. ಇದಕ್ಕಿಂತ ಆಶ್ಚರ್ಯದ ಸಂಗತಿಯಿನ್ನೇನಿದೆ?

ಇದೆಲ್ಲ ನಿರಾಶಾವಾದಿಯ ದೃಷ್ಟಿಕೋನವಾಯಿತು ಎಂದು ನೀವು ಹೇಳುತ್ತೀರಿ. ನಾವು ಮತ್ತೆ ಮತ್ತೆ ಮೃತ್ಯುವಿನಿಂದ ಪಾರಾದುದು ಭಗವಂತನ ಕೃಪೆ ಎಂದು ಸಂತೋಷಪಡಬೇಕು. ಆದರೆ ನೀವು ಮೃತ್ಯುವನ್ನು ಸ್ಮರಿಸು ಎಂದು ಹೇಳುತ್ತಿದ್ದೀರಿ. ಇಂತಹ ಘಟನೆಗಳು ನಡೆಯುತ್ತಲೇ ಇರುತ್ತವೆ. ಪ್ರತಿಯೊಂದು ಘಟನೆಯನ್ನು ಗಂಭೀರವಾಗಿ ತೆಗೆದುಕೊಂಡರೆ ಜೀವನ ಕಠಿಣವಾಗುತ್ತದೆ.

ಇಲ್ಲ, ಹಾಗಲ್ಲ. ಯಥಾರ್ಥವನ್ನು, ವಸ್ತುಸ್ಥಿತಿಯನ್ನು ವಿವೇಕದಿಂದ ವಿಚಾರ ಮಾಡುವುದು ನಿರಾಶಾವಾದವಾಗದು. ಆದರೆ ಸುಖವನ್ನು ಕುರಿತು, ಜೀವನವನ್ನು ಕುರಿತು ನಮಗಿರುವ ಪ್ರಬಲ ಆಸಕ್ತಿ ದುಃಖವನ್ನು, ಮೃತ್ಯುವನ್ನು ಸ್ವೀಕರಿಸಲು ಬಿಡುವುದಿಲ್ಲ. ಹಾಗೆಂದು ದುಃಖವನ್ನೇ, ಮರಣವನ್ನೇ ಕುರಿತು ಯೋಚಿಸುತ್ತಿರುವುದು, ಅದಕ್ಕೇ ಸರ್ವಾಧಿಕ ಪ್ರಾಮುಖ್ಯತೆಯನ್ನು ಕೊಡುವುದು, ಸುಖಕ್ಕೆ ಹಾಗೂ ಜೀವನಕ್ಕೇ ಅಂಟಿಕೊಂಡಷ್ಟೇ ಕೆಡುಕಾದದು, ಅನಾರೋಗ್ಯಕರವಾದುದು. ಜೀವನ–ಮರಣ ಎರಡನ್ನೂ ಸತ್ಯವೆಂದು ಬಗೆದು ಎರಡನ್ನೂ ಮೀರಿ ಬೆಳೆಯುವ ಪ್ರಯತ್ನವನ್ನು ಮಾಡಬೇಕು.

ಮೃತ್ಯುವಿನ ಚಿಂತನೆ ಮಾಡದಿರುವುದು, ನಾನೂ ಒಂದು ದಿನ ಮೃತ್ಯುವಿನ ಬಾಯೊಳಗೆ ಹೋಗುವುದಿದೆ — ಎಂದು ಯೋಚನೆ

ಯನ್ನೇ ಮಾಡದಿರುವುದು ಬೌದ್ಧಿಕ ಸಂವೇದನಾ ಶೂನ್ಯತೆಯೇ ಆಗಿದೆ. ಸಾಯಲು ಯಾರೂ ಇಷ್ಟಪಡುವುದಿಲ್ಲ, ಎಲ್ಲರಿಗೂ ಅಮರರಾಗುವ ಆಸೆ, ಅದರರ್ಥ ನಾವು ಮೃತ್ಯುವಿನ ವಿಚಾರದಲ್ಲಿ ಕಣ್ಣು ಮುಚ್ಚಿಕೊಂಡಿರಬೇಕು ಎಂದಲ್ಲ. ಮೃತ್ಯುವನ್ನು ಒಪ್ಪಿ, ಅದನ್ನು ಜಯಿಸುವ ಪ್ರಯತ್ನವನ್ನು ಮಾಡಬೇಕು. ಸ್ವಾಮಿ ವಿವೇಕಾನಂದರು, ''ಮೃತ್ಯುವನ್ನು ಧ್ಯಾನಿಸು, ಅದು ನಿನ್ನ ಶಕ್ತಿಯನ್ನು, ಧೈರ್ಯವನ್ನು ನೂರ್ಮಡಿಗೊಳಿಸುತ್ತದೆ'' ಎಂದು ಕರೆ ಕೊಡುತ್ತಾರೆ.

## ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ

ಮೃತ್ಯುವನ್ನು ಪ್ರಶ್ನಿಸಿ, ಪರೀಕ್ಷಿಸಿ, ಅದಕ್ಕೆ ಎದುರುಬದುರಾಗಿ ನಿಂತು, ಅದರೊಂದಿಗೆ ಸೆಣಸಿ, ಜಯಶಾಲಿಗಳಾದ ಕೆಲವು ಮಹಾಪುರುಷರ ಉದಾಹರಣೆಗಳನ್ನು ನೋಡೋಣ: ಮೊದಲ ಉದಾಹರಣೆ ಬುದ್ಧನದು. ಅವನ ಜೀವನದಲ್ಲಿ ಮೃತ್ಯು ಬರಲಿಲ್ಲ. ಅವನ ಬಂಧುಬಳಗದ ಮರಣವನ್ನೂ ನೋಡಲಿಲ್ಲ. ಆದರೆ ಒಂದು ಮೃತದೇಹವನ್ನು ಅವನು ನೋಡಿದನು. ಅವನನ್ನು ಪ್ರಮಾದದ ನಿದ್ರೆಯಿಂದ ಎಚ್ಚರಗೊಳಿಸಲು ಅಷ್ಟೇ ಸಾಕಾಯಿತು. ಏನು, ನಾಳೆ ಒಂದು ದಿನ ನಾನೂ ಸಾಯುತ್ತೇನೇನು ಎಂಬ ಪ್ರಶ್ನೆ ಅವನನ್ನು ಬೃಹದಾಕಾರವಾಗಿ ಕಾಡಿತು. ಆ ಪ್ರಶ್ನೆಗೆ ಉತ್ತರವನ್ನು ಹುಡುಕಲು ಬುದ್ಧ ವ್ಯಾಕುಲನಾದ. ಮೃತ್ಯುವಿನ ಮೇಲೆ ಜಯ ಸಾಧಿಸಲು ದೃಢನಿಶ್ಚಯ ಬುದ್ಧಿ ತಾಳಿದ. ಅವನು ಸರ್ವಸಂಗ ಪರಿತ್ಯಾಗವನ್ನು ಮಾಡಿದ. ಕಠಿಣ ತಪಸ್ಸಿನಿಂದ ಮೃತ್ಯುವಿನ ರಹಸ್ಯವನ್ನು ಭೇದಿಸಿದ್ದಷ್ಟೇ ಅಲ್ಲ, ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ದುಃಖಗಳಿಂದ ಪಾರಾಗುವ ಉಪಾಯವನ್ನು ಮಾನವತೆಗೆ ತೋರಿಸಿದ.

ಬೃಹದಾರಣ್ಯಕ ಉಪನಿಷತ್ತಿನಲ್ಲಿ 'ಯಾಜ್ಞವಲ್ಕ್ಯ ಮೈತ್ರೇಯಿ ಸಂವಾದ' ಎಂಬ ಪ್ರಸಿದ್ಧ ಪ್ರಕರಣ ಬರುತ್ತದೆ. ಬ್ರಹ್ಮಜ್ಞರಾದ ಋಷಿ ಯಾಜ್ಞವಲ್ಕ್ಯರು ಸಂನ್ಯಾಸಕ್ಕೆ ಹೊರಟು ನಿಂತಾಗ ತಮ್ಮ ಆಸ್ತಿಯನ್ನು ಇಬ್ಬರು ಪತ್ನಿಯರಿಗೆ ಹಂಚಬಯಸುತ್ತಾರೆ. ಅವರಲ್ಲಿ ಓರ್ವ ಪತ್ನಿ ಮೈತ್ರೇಯಿ, ''ನೀವು ನೀಡುವ ಹಣ ಅಮರತ್ವವನ್ನು ಕೊಡುತ್ತದೇನು?'' ಎಂದು ಪ್ರಶ್ನಿಸುತ್ತಾಳೆ ಯಾಜ್ಞವಲ್ಕ್ಯರು, ''ಧನದಿಂದ ನೀನು ಸುಖ-ಸೌಕರ್ಯದಿಂದ ಕೂಡಿದ ಜೀವನವನ್ನು ನಡೆಸಬಹುದು. ಆದರೆ ಧನದಿಂದ ಅಮೃತತ್ವವು ಸಿಗುವ ಆಸೆ ಇಲ್ಲ'' - 'ಅಮೃತತ್ವಸ್ಯ ತು ನಾಶಾಸ್ತಿ ವಿತ್ತೇನೇತಿ' ಎಂದು ಹೇಳಿದರು. ಮೈತ್ರೇಯಿ, ''ಅಮೃತತ್ವವನ್ನು ನೀಡಲಾರದ ಹಣವನ್ನು ಕಟ್ಟಿಕೊಂಡು ನಾನು ಏನು ಮಾಡಲಿ? ಭಗವನ್, ತಾವು ನನಗೆ ಅಮೃತತ್ವದ ಉಪಾಯ ಕಲಿಸಿಕೊಡಿರಿ'' ಎಂದು ಪ್ರಾರ್ಥಿಸುತ್ತಾಳೆ. ಸಂಪ್ರೀತರಾದ ಯಾಜ್ಞವಲ್ಕ್ಯರು, ''ನೀನು ನನಗೆ ಮೊದಲಿನಿಂದಲೂ ಪ್ರಿಯಳಾಗಿದ್ದೆ. ಈಗ ನೀನು ನನಗೆ ಪ್ರಿಯವಾದ ವಿಷಯವನ್ನು ಹೇಳುತ್ತಿರುವೆ'' ಎನ್ನುತ್ತಾ ಆತ್ಮತತ್ತ್ವವನ್ನು ಬೋಧಿಸುತ್ತಾರೆ.

ನಮ್ಮ ಈ ಯುಗದ ರಮಣ ಮಹರ್ಷಿಗಳ ಉದಾಹರಣೆ ನಮ್ಮ ಕಣ್ಮುಂದೆ ಇದೆ. ಯುವಕ ವೆಂಕಟರಮಣನಿಗೆ ಮೃತ್ಯುಭಯ ಆವರಿಸಿತು. ತಾನು ಸತ್ತಿದ್ದೇನೆ ಎಂದು ಅವನು ಕಲ್ಪಿಸಿಕೊಂಡನು. ದೇಹವನ್ನು ಮೃತ ಎಂದು ಬಗೆದು, 'ಮೃತ್ಯು ಯಾರಿಗೆ?' ಎಂದು ವಿಚಾರಿಸತೊಡಗಿದನು. ದೇಹ ಮೃತವಾಗಿದೆ ಎಂಬುದನ್ನು ನೋಡುವ 'ನಾನು ಯಾರು?' ಎಂಬ ವಿಚಾರದಿಂದ ಅವನಿಗೆ ಸ್ವರೂಪದ ಸಾಕ್ಷಾತ್ಕಾರವಾಯಿತು.

ಕಠೋಪನಿಷತ್ತಿನಲ್ಲಿ ಬರುವ ನಚಿಕೇತನದು ಸುಂದರವಾದ ಕಥೆ. ಅವನ ತಂದೆ ಒಂದು ಯಜ್ಞಸಂಕಲ್ಪವನ್ನು ಮಾಡಿದ್ದನು. ಅದರ ಪ್ರಕಾರ ಅವನು ಸರ್ವಸ್ವವನ್ನೂ ದಾನ ಮಾಡಬೇಕಿತ್ತು. ಆದರೆ ಅವನು ಹಾಲು ಕರೆಯದ ವೃದ್ಧ ಹಸುಗಳನ್ನಷ್ಟೇ ದಾನ ಮಾಡಿದ್ದನು. ಈ ಬಗೆಯ ದಾನ ಮಾಡುವವರಿಗೆ ನರಕ ಪ್ರಾಪ್ತಿಯಾಗುತ್ತದೆ ಎಂದು ಮಗ ನಚಿಕೇತನು ಯೋಚಿಸಿದನು. ''ನನ್ನನ್ನು ಯಾರಿಗೆ ದಾನ ಮಾಡುತ್ತೀ'' ಎಂದು ಮಗ ಕೇಳಿದನು. ಮಗ ಮತ್ತೆ ಮತ್ತೆ ಅದೇ ಪ್ರಶ್ನೆಯನ್ನು ಕೇಳಿದಾಗ ತಂದೆಯು, ''ನಿನ್ನನ್ನು ಯಮನಿಗೆ ಕೊಡುತ್ತೇನೆ'' ಎಂದನು. ನಿರ್ಭೀತನಾದ ಬಾಲಕ ಯಮನ ದ್ವಾರದಲ್ಲಿ ಹೋಗಿ ನಿಂತನು. ಯಮ ಅವನಿಗೆ ಮೂರು ವರಗಳನ್ನು ನೀಡಲು ಮುಂದಾದನು. ಮೊದಲೆರಡು ವರವನ್ನು ಕೇಳಿದ ತರುವಾಯ ನಚಿಕೇತ ಮೂರನೆಯ ವರವನ್ನು ಹೀಗೆ ಕೇಳುತ್ತಾನೆ:

**ಯೇಽಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ**
**ಅಸ್ತೀತ್ಯೇಕೇ ನಾಯಮಸ್ತೀತಿ ಚೈಕೇ ।**
**ಏತದ್ವಿದ್ಯಾಮನುಶಿಷ್ಟಸ್ತ್ವಯಾಽಹಂ**
**ವರಾಣಾಮೇಷ ವರಸ್ತೃತೀಯಃ ॥** *(ಕಠೋಪನಿಷತ್ ೧.೨೦)*

'ಕೆಲವರು ಹೇಳುತ್ತಾರೆ, 'ಸತ್ತ ಮೇಲೆ ಮನುಷ್ಯ ಇರುವುದಿಲ್ಲ'. ಕೆಲವರು ಹೇಳುತ್ತಾರೆ, 'ಅವನು ಇರುತ್ತಾನೆ'. ಈ ಪ್ರಶ್ನೆಗೆ ನಾನು ಉತ್ತರವನ್ನು ಅರಿಯಬಯಸುತ್ತೇನೆ. ಇದು ನನ್ನ ತೃತೀಯ ವರ.'

ಯಮ ಉತ್ತರಿಸುತ್ತಾನೆ, ''ಈ ಪ್ರಶ್ನೆ ಬಹಳ ಗಹನವಾದುದು. ದೇವತೆಗಳೂ ಈ ಪ್ರಶ್ನೆಯನ್ನು ಕೇಳಿದ್ದರು. ಆದರೆ ಉತ್ತರವನ್ನು ಕಾಣಲಿಲ್ಲ. ನೀನು ಅನ್ಯ ವರವನ್ನು ಕೇಳು. ದೀರ್ಘ ಆಯುಸ್ಸನ್ನು ಕೇಳು, ಧನ ಸಂಪತ್ತನ್ನು ಕೇಳು, ಸ್ವರ್ಗ ಸುಖಭೋಗಗಳನ್ನು ಕೇಳು. ಪುತ್ರ-ಪೌತ್ರರನ್ನು ಕೇಳು. ಈ ಪ್ರಶ್ನೆಯೊಂದನ್ನು ಕೇಳಬೇಡ.'' ನಚಿಕೇತ ವಿಚಲಿತನಾಗಲಿಲ್ಲ. ಯಮನ ಪ್ರಲೋಭನೆಗಳಿಗೆ ಮನ ಸೋಲಲಿಲ್ಲ. ಅವನು ಉತ್ತರಿಸುತ್ತಾನೆ, ''ಚಿರಕಾಲದ ಜೀವನವೂ ಅಲ್ಪವಾದುದೇ, ಭೋಗಗಳು ಇಂದ್ರಿಯಗಳ ತೇಜಸ್ಸನ್ನು ಕ್ಷೀಣಗೊಳಿಸುತ್ತದೆ. ಹಣದಿಂದ ಇದುವರೆಗೆ ಯಾವ ಮನುಷ್ಯನೂ ತೃಪ್ತನಾಗಿಲ್ಲ. ಈ ಎಲ್ಲ ಇಂದ್ರಿಯಗಳೂ, ಸುಖಭೋಗಗಳೂ ನಿನಗೆ ಇರಲಿ. ನೀನು ನನಗೆ ಮೃತ್ಯುರಹಸ್ಯವೊಂದನ್ನೇ ಹೇಳು.'' ನಚಿಕೇತನ ವಿವೇಕ-ವೈರಾಗ್ಯವನ್ನು ಕಂಡು ಸಂಪ್ರೀತನಾದ ಯಮಧರ್ಮ ಅವನಿಗೆ ಮೃತ್ಯುರಹಸ್ಯವನ್ನು ಮತ್ತು ಆತ್ಮಸ್ವರೂಪವನ್ನು ಬೋಧಿಸುತ್ತಾನೆ. ಅದನ್ನು ನಾವು ಕಠೋಪನಿಷತ್ತಿನಲ್ಲಿ ನೋಡುತ್ತೇವೆ.

ಮೃತ್ಯುವಿನ ರಹಸ್ಯವನ್ನು, ಮೃತ್ಯುವನ್ನು ಜಯಿಸುವ ಉಪಾಯವನ್ನು ಬುದ್ಧನ ಉಪದೇಶಗಳಲ್ಲಿ, ಯಾಜ್ಞವಲ್ಕ್ಯರು ಮೈತ್ರೇಯಿಗೆ ನೀಡಿದ ಉಪದೇಶಗಳಲ್ಲಿ, ರಮಣ ಮಹರ್ಷಿಗಳ ಬೋಧನೆಗಳಲ್ಲಿ ಮತ್ತು ಕಠೋಪನಿಷತ್ತಿನ ಯಮಧರ್ಮ ಮತ್ತು ನಚಿಕೇತನ ಸಂವಾದದಲ್ಲಿ ಕಾಣಬಹುದು. ಆದರೆ ಅವನ್ನು ಓದಿದ ಮಾತ್ರಕ್ಕೆ ನಾವು ಮೃತ್ಯುವನ್ನು ಗೆಲ್ಲಲು ಆಗುವುದಿಲ್ಲ. ಬುದ್ಧನ ಮನಸ್ಥಿತಿಯನ್ನು ತಲುಪುವವರೆಗೆ ನಾವು ಅದನ್ನು ಅರಿಯಲು ಸಾಧ್ಯವಿಲ್ಲ. ಮನಸ್ಸು

ಇಂದ್ರಿಯ ವಿಷಯಭೋಗಗಳ ಕಡೆ ಆಕರ್ಷಿತವಾಗಿದ್ದರೆ, ನಾವು ಧನಲೋಭಿಗಳಾಗಿದ್ದರೆ, ಪತ್ನಿ-ಪುತ್ರರಲ್ಲಿ ಅನುರಕ್ತರಾಗಿದ್ದರೆ, ನಚಿಕೇತನಂತೆ ಯಮಧರ್ಮನ ಉಪದೇಶಕ್ಕೆ ಅಧಿಕಾರಿಗಳಾಗಲಾರೆವು. ನಾವು ಅದನ್ನು ಕೇಳಿದರೂ, ಓದಿದರೂ ಉಪಯೋಗವಾಗಲಾರದು. ಬುದ್ಧನ ತ್ಯಾಗಬುದ್ಧಿಯಿಲ್ಲದೆ, ನಚಿಕೇತನ ವಿವೇಕ- ವೈರಾಗ್ಯವಿಲ್ಲದೆ, ಮೈತ್ರೇಯಿಯ ಏಕಾಗ್ರತೆ, ತತ್ತ್ವಜಿಜ್ಞಾಸೆಯಿಲ್ಲದೆ ಚಿತ್ತಶುದ್ಧಿ ಲಭಿಸದು. ಚಿತ್ತಶುದ್ಧಿಯಿಲ್ಲದೆ ಮೃತ್ಯುವಿನಿಂದ ಪಾರಾಗಲು ಉತ್ಕಟ ವ್ಯಾಕುಲತೆ ಉದಿಸದು. ಆದ್ದರಿಂದಲೇ ಆಧ್ಯಾತ್ಮಿಕ ಜೀವನದಲ್ಲಿ ತ್ಯಾಗ, ವೈರಾಗ್ಯ, ಸಂಯಮಗಳಿಗೆ ಬಹಳ ಒತ್ತು ಕೊಡಲಾಗಿದೆ. ಮೊತ್ತಮೊದಲನೆಯದಾಗಿ ನಾವು ಸ್ವಪ್ರಯತ್ನದಿಂದ ಮನಸ್ಸನ್ನು ಏಕಾಗ್ರಗೊಳಿಸಬೇಕು. ಆಗ ಮೃತ್ಯುರಹಸ್ಯವನ್ನು ಜಿಜ್ಞಾಸೆಗೈಯುವ ಮತ್ತು ಜಿಜ್ಞಾಸೆಯನ್ನು ಧರಿಸಿಕೊಳ್ಳುವ ಯೋಗ್ಯತೆ ಬರುತ್ತದೆ.

### ಮೃತ್ಯುಂಜಯರು

ಮೃತ್ಯುರಹಸ್ಯವನ್ನು ಭೇದಿಸಿದ ಮೇಲಿನ ಉದಾಹರಣೆಗಳ ಹೊರತಾಗಿ ಇನ್ನೂ ಕೆಲವು ಮಹಾಪುರುಷರು ಮೃತ್ಯುವನ್ನು ಜಯಿಸಿರುವರು. ಭೀಷ್ಮನಿಗೆ ಇಚ್ಛಾಮರಣದ ವರ ಇತ್ತು. ಅವನು ಕುರುಕ್ಷೇತ್ರದಲ್ಲಿ ಶರಶಯ್ಯೆಯಲ್ಲಿ ಮಲಗಿ ಉತ್ತರಾಯಣಕ್ಕಾಗಿ ಕಾಯುತ್ತಿದ್ದನು. ಉತ್ತರಾಯಣ ಬರುತ್ತಲೇ ಅವನು ಸ್ವ ಇಚ್ಛೆಯಿಂದ ಪೂರ್ಣ ಅರಿವಿನಿಂದ ಪ್ರಾಣವನ್ನು ಬಿಟ್ಟನು. ಮೃತ್ಯುವನ್ನು ಕಾಯುವಂತೆ ಮಾಡಿದ ಈ ಬಗೆಯ ಉದಾಹರಣೆಗಳು ವಿರಳವೇ ಸರಿ. ಇನ್ನೊಂದು ಉದಾಹರಣೆ ಸ್ವಾಮಿ ವಿವೇಕಾನಂದರದು. ಅವರು ಅಮರನಾಥ ಯಾತ್ರೆ ಮಾಡಿದಾಗ ಶಿವನು ಅವರಿಗೆ ಇಚ್ಛಾಮರಣದ ವರವನ್ನು ಕೊಟ್ಟಿದ್ದನು. ಅವರು ಕೊನೆಗೆ ಸ್ವ ಇಚ್ಛೆಯಿಂದಲೇ ಪ್ರಾಣವನ್ನು ತ್ಯಾಗ ಮಾಡುತ್ತಾರೆ.

ಆದರೆ ನಮ್ಮಂತಹ ಸಾಮಾನ್ಯ ಮನುಷ್ಯರಿಗೆ ಈ ರೀತಿ ಮೃತ್ಯುವನ್ನು ಕೈಯಲ್ಲಿ ಹಿಡಿದುಕೊಳ್ಳುವುದು ಸಾಧ್ಯವಿಲ್ಲ. ನಾವು ಮೃತ್ಯುವಿನ ಸ್ವರೂಪವನ್ನು ತಿಳಿದುಕೊಳ್ಳಬೇಕು. ಅದಕ್ಕಾಗಿ ನಾವು ಯಮಧರ್ಮನು ನಚಿಕೇತನಿಗೆ ನೀಡಿದ ಅರಿವನ್ನು ಪಡೆಯಲೆತ್ನಿಸೋಣ.

ಯಮ ನಚಿಕೇತನಿಗೆ ನೀಡಿದ ಉತ್ತರವೇನು? ಮೃತ್ಯುವಿನ ಬಳಿಕ ಜೀವಿ ಇರುತ್ತಾನೆಯೋ ಇಲ್ಲವೋ- ಈ ಪ್ರಶ್ನೆಗೆ ಉತ್ತರವನ್ನರಿತರೆ ನಾವು ಮೃತ್ಯುರಹಸ್ಯವನ್ನರಿತಂತೆ. ಯಮ ನಚಿಕೇತನಿಗೆ ಅದ್ಭುತವಾದ ಉತ್ತರವನ್ನು ಕೊಟ್ಟಿರುವನು. ಅವನು ಹೇಳಿದನು, "ನಿನ್ನ ಪ್ರಶ್ನೆ ಬಹಳ ಗಹನವಾದುದು. ಆತ್ಮನಿಗೆ ಹುಟ್ಟೂ ಇಲ್ಲ. ಸಾವೂ ಇಲ್ಲ. ಸಾವೇ ಇಲ್ಲವೆಂದಾದ ಮೇಲೆ ಸಾವಿನ ಕುರಿತ ಪ್ರಶ್ನೆ ಎಲ್ಲಿಯದು?

**ನ ಜಾಯತೇ ಮ್ರಿಯತೇ ವಾ ವಿಪಶ್ಚಿ-**
**ನ್ನಾಯಂ ಕುತಶ್ಚಿನ್ನ ಬಭೂವ ಕಶ್ಚಿತ್ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥** *(ಕಠೋಪನಿಷತ್ ೨.೧೮)*

ಅಜ, ನಿತ್ಯ, ಶಾಶ್ವತ, ಪುರಾತನನಾದ ಆತ್ಮನು ಶರೀರದೊಂದಿಗೆ ನಾಶವಾಗುವುದಿಲ್ಲ. ಸಾಯುವುದು ಶರೀರ. ಈ ಶರೀರವನ್ನು ನಾನು ಎಂದು ಬಗೆದು ನಾವು ಸಾವಿಗೆ ಹೆದರುತ್ತಿದ್ದೇವೆ. ಮಾತ್ರವಲ್ಲ ದೇಹವನ್ನೇ ಆತ್ಮವೆಂದು ಬಗೆದು, ದೇಹವನ್ನೇ ನಿತ್ಯ, ಅಮರ ಎಂದು ಭಾವಿಸುತ್ತ ವ್ಯವಹಾರದ ಜಗತ್ತಿನ ಚಟುವಟಿಕೆಗಳಲ್ಲಿ ತೊಡಗಿರುತ್ತೇವೆ; ವಿಷಯಾಸಕ್ತರಾಗಿರುತ್ತೇವೆ. ದೇಹಕ್ಕೆ ಸಂಬಂಧಿಸಿದ ತಾಯಿ- ತಂದೆ, ಪತಿ-ಪತ್ನಿ, ಬಂಧು-ಮಿತ್ರರಲ್ಲಿ ಆಸಕ್ತರಾಗುತ್ತೇವೆ. ಮತ್ತು ಮತ್ತೆ ಮತ್ತೆ ದುಃಖಭಾಜನರಾಗುತ್ತೇವೆ. ಮೃತ್ಯುಭಯದಿಂದ ಪಾರಾಗಲು ನಾನು ದೇಹವಲ್ಲ, ಅಮರ ಆತ್ಮ ಎಂಬ ದೃಢನಿಶ್ಚಯಬುದ್ಧಿ ಅನಿವಾರ್ಯ. ಅದರ ಜೊತೆಯಲ್ಲಿ ವಿಷಯಾಸಕ್ತಿ, ಬಂಧು-ಬಳಗದ ಆಸಕ್ತಿಯನ್ನು ತ್ಯಜಿಸಬೇಕು. ನಾನು ನಿತ್ಯಶುದ್ಧಬುದ್ಧಮುಕ್ತ ಆತ್ಮ ಎಂದು ಹೇಳುವುದು ಮತ್ತು ವಿಷಯಾಸಕ್ತಿಯನ್ನು ಮುಂದುವರಿಸುವುದು ನಡೆಯುವುದಿಲ್ಲ. ಆತ್ಮಸ್ವರೂಪದ ಕುರಿತ ದೃಢನಿಶ್ಚಯವು ನಮ್ಮ ಇಡೀ ವ್ಯಕ್ತಿತ್ವವನ್ನು, ನಮ್ಮ ಆಚಾರ-ವ್ಯವಹಾರ-ವರ್ತನೆಯನ್ನು ಬದಲಾಯಿಸಬೇಕು. ಅದು ಅತ್ಯಂತ ಕಠಿಣ. ಅದಕ್ಕಾಗಿ ಈ ತತ್ತ್ವವನ್ನು ಮತ್ತೆ ಮತ್ತೆ ಶ್ರವಣ-ಮನನ-ನಿದಿಧ್ಯಾಸನಗೈಯಬೇಕು.

ಮೃತ್ಯುರಹಸ್ಯವನ್ನರಿಯಲು ಆತ್ಮಸ್ವರೂಪಜ್ಞಾನದ ಹೊರತಾಗಿ ಬೇರೆ ಯಾವುದಾದರೂ ಉಪಾಯವಿದೆಯೇನು? ಏಕೆಂದರೆ ಹೆಚ್ಚಿನವರಿಗೆ ಆತ್ಮ-ಅನಾತ್ಮ, ವಿವೇಕ-ವಿಚಾರ ಕಷ್ಟವಾಗುತ್ತದೆ. ಹೌದು, ಇನ್ನೊಂದು ಉಪಾಯ ಇದೆ. ನಾವು ನಮ್ಮ ಇಷ್ಟದೇವತೆಯಾದ ಶಿವ, ವಿಷ್ಣು, ಕೃಷ್ಣ ಇವರಲ್ಲಿ ಒಂದು ವಿಶೇಷವನ್ನು ಗಮನಿಸುತ್ತೇವೆ. ಶಿವ ಸ್ಮಶಾನದಲ್ಲಿ ವಾಸಿಸುತ್ತಾನೆ, ಅವನ ಸುತ್ತಮುತ್ತ ಭೂತಪ್ರೇತಗಳು; ವಿಷಪೂರಿತ ಹಾವುಗಳು ಅವನ ಆಭರಣ. ಅವನ ಕಂಠದಲ್ಲಿ ಕಾಲಕೂಟ ವಿಷವಿದೆ. ಅವನ ಸುತ್ತಮುತ್ತೆಲ್ಲ ಮೃತ್ಯುವಿನ ಲಕ್ಷಣಗಳೇ. ವಿಷ್ಣು ಕಾಲದ ಪ್ರತೀಕವಾದ ಆದಿಶೇಷನ ಮೇಲೆ ಪವಡಿಸಿದ್ದಾನೆ. ಕೃಷ್ಣ ಕಾಲಿಯನ ಹೆಡೆಯನ್ನು ಮೆಟ್ಟಿ ನರ್ತಿಸುತ್ತಿದ್ದಾನೆ. ಹೀಗೆ ನಮ್ಮ ಇಷ್ಟದೇವನು ಮೃತ್ಯುಂಜಯನಾಗಿದ್ದಾನೆ. ಒಬ್ಬ ಮೃತ್ಯುವಿನ ಮಡಿಲಲ್ಲಿ ನಿಶ್ಚಿಂತವಾಗಿ ಮಲಗಿದ್ದರೆ, ಇನ್ನೊಬ್ಬ ಮೃತ್ಯುವಿನ ಹೆಡೆಯ ಮೇಲೆ ಆನಂದದಿಂದ ನರ್ತಿಸುತ್ತಿದ್ದಾನೆ. ಇನ್ನೊಬ್ಬ ಮೃತ್ಯುವನ್ನೇ ಆಭರಣವಾಗಿ ಧರಿಸಿದ್ದಾನೆ. ಇಂತಹ ದೇವನನ್ನು ನಾವು ಪೂಜಿಸುವಾಗ ಮೃತ್ಯುಭಯವೆಲ್ಲಿಯದು? ಆದ್ದರಿಂದ ನಾವು ಮೃತ್ಯುಭಯದಿಂದ ಪಾರಾಗಲು ಮೃತ್ಯುಂಜಯ ಭಗವಂತನನ್ನು ಹಿಡಿದುಕೊಳ್ಳೋಣ. ಅವನಲ್ಲಿ ಶರಣಾಗೋಣ. ಭಗವತ್ಪ್ರೇಮ, ಭಕ್ತಿಯೇ ಮೃತ್ಯುಭಯದಿಂದ ಪಾರಾಗಲು ಇರುವ ಉಪಾಯ.

ಮೊದಲಿನದು ಜ್ಞಾನಮಾರ್ಗ, ವಿಚಾರಮಾರ್ಗ. ಎರಡನೆಯದು ಭಕ್ತಿಮಾರ್ಗ. ಜ್ಞಾನಿ ಹೇಳುತ್ತಾನೆ, ನಾನು ಅಮರ ನಿತ್ಯ ಆತ್ಮ. ನನ್ನನ್ನು ಮೃತ್ಯು ಸೋಕಲಾರದು. ಭಕ್ತ ಹೇಳುತ್ತಾನೆ, ನನ್ನ ಪ್ರಭು ಮೃತ್ಯುಂಜಯ, ನಾನು ಅವನ ಶಿಶು, ಭಕ್ತ, ಮೃತ್ಯು ನನ್ನ ರೋಮವನ್ನೂ ಮಿಸುಕಲಾರದು. ಈ ಎರಡು ಮಾರ್ಗಗಳಲ್ಲೂ ದೇಹವನ್ನು ಅಮರವಾಗಿಸುವ ಪ್ರಯತ್ನ ಇಲ್ಲ, ಬದಲಾಗಿ ದೇಹಾಸಕ್ತಿಯನ್ನು, ದೇಹಾತ್ಮ ಬುದ್ಧಿಯನ್ನು ತೊರೆಯುವ ಮಾತೇ ಇದೆ, ಎಂಬುದನ್ನು ನೆನಪಿಡಬೇಕು. ದೇಹಬುದ್ಧಿಯನ್ನು ಬಿಡದೆ ಮೃತ್ಯು ಜಯದ ಮಾತೇ ಇಲ್ಲ.

ಭಕ್ತಿಯ ಸಹಾಯದಿಂದ ಹೇಗೆ ಮೃತ್ಯು ಜಯವನ್ನು ಪಡೆಯಬಹುದು ಎಂಬುದಕ್ಕೆ ಶ್ರೀರಾಮಕೃಷ್ಣರ ಜೀವನದಲ್ಲಿ ಒಂದು

ಸುಂದರ ಘಟನೆ ಕಾಣಸಿಗುತ್ತದೆ. ಒಬ್ಬ ಭಕ್ತ ಮಣಿಮಲ್ಲಿಕನ ಯುವಕ ಮಗ ಆಕಸ್ಮಿಕವಾಗಿ ತೀರಿಕೊಂಡನು. ಅವನ ಅಂತ್ಯಕ್ರಿಯೆಯಾಗುತ್ತಲೇ ಆ ಭಕ್ತ ಸಾಂತ್ವನಕ್ಕಾಗಿ ಶ್ರೀ ರಾಮಕೃಷ್ಣರ ಹತ್ತಿರ ಹೋಗುತ್ತಾನೆ. ಶ್ರೀರಾಮಕೃಷ್ಣರು ಭಕ್ತರೊಡನೆ ಮಾತುಕತೆಯಾಡುತ್ತಿದ್ದರು. ಶೋಕತಪ್ತ ಮಣಿಮಲ್ಲಿಕನಿಗೆ ಒಬ್ಬರಾದ ಮೇಲೆ ಒಬ್ಬ ಭಕ್ತರು, ಒಂದೊಂದು ಬಗೆಯಲ್ಲಿ ಸಾಂತ್ವನ ನೀಡತೊಡಗಿದರು. ಆದರೆ ಶ್ರೀರಾಮಕೃಷ್ಣರು ಮೌನವಾಗಿ ಕುಳಿತಿದ್ದರು. ಅವರು ಇದ್ದಕ್ಕಿದ್ದಂತೆ ಎದ್ದು ನಿಂತರು. ಅರ್ಧಬಾಹ್ಯಾವಸ್ಥೆಯಲ್ಲೆ ಒಂದು ಭಜನೆಯನ್ನು ಹೇಳತೊಡಗಿದರು:

ಕಾಲ ನಿನ್ನ ಮನೆಬಾಗಿಲನ್ನು ತಟ್ಟುವ ಮೊದಲು
ಯುದ್ಧಕ್ಕೆ ಸನ್ನದ್ಧನಾಗು.
ಕಾಳಿನಾಮದ ಅಸ್ತ್ರವನ್ನು ಹಿಡಿದು ಯುದ್ಧ ಮಾಡು.
ನಿನ್ನ ಯುದ್ಧ ಗಂಗಾದಡದಿ ನಡೆದರೆ
ನೀನು ಜಯಿಸುವುದು ನಿಶ್ಚಿತ!

ಶ್ರೀರಾಮಕೃಷ್ಣರು ವೀರಭಾವದಲ್ಲಿ ಈ ಮೇಲಿನ ಭಜನೆಯನ್ನು ಹಾಡಿದಾಗ ಅಲ್ಲಿನ ವಾತಾವರಣ ಬದಲಾಯಿತು. ಅವನ ವಿಷಾದ ದೂರವಾಯಿತು. ಸಾವನ್ನೆದುರಿಸುವ ಒಂದು ಧೈರ್ಯ ಅವನಲ್ಲಿ ಉದಿಸಿತು. ಭಜನೆ ಮುಗಿದ ತರುವಾಯ ಶ್ರೀರಾಮಕೃಷ್ಣರು ಅವನ ಹತ್ತಿರ ಕುಳಿತು ಅವನಿಗೆ ಸಮಾಧಾನ ಹೇಳತೊಡಗಿದರು. ಪುತ್ರಶೋಕ ಬಹಳ ದಾರುಣವಾದುದು ಎಂದು ಹೇಳುತ್ತ, ಅಕ್ಷಯನ ಮರಣ ಸಂದರ್ಭದಲ್ಲಿ ತಮ್ಮ ದುಃಖವನ್ನು ಹೇಳಿಕೊಂಡರು. ''ನಾನು ತಾಯಿಯ ಹೆಸರನ್ನು ಹೇಳಿಯೂ ನನಗೆ ಇಷ್ಟೊಂದು ಕಷ್ಟಗಳು'' ಎಂದರು. ಶೋಕ-ದುಃಖಗಳು ಜೀವನದಲ್ಲಿ ಅನಿವಾರ್ಯ, ಆದರೆ ಭಗವಂತನನ್ನು ಹಿಡಿದುಕೊಂಡರೆ ನಾವು ತತ್ತರಿಸಿಹೋಗುವುದಿಲ್ಲ. ಗಂಗೆಯಲ್ಲಿ ಸ್ಟೀಮರ್ ಬಂದಾಗ ದೊಡ್ಡ ದೊಡ್ಡ ಅಲೆಗಳು ಏಳುತ್ತವೆ, ಆ ಅಲೆಗಳು ದೋಣಿ ಜಹಜುಗಳನ್ನು ಹೊಡೆದು ಅವನ್ನು ಅಲುಗಾಡಿಸಿಬಿಡುತ್ತವೆ. ಸಣ್ಣ ಸಣ್ಣ ದೋಣಿಗಳು ಆ ಅಲೆಯ ರಭಸಕ್ಕೆ ಮಗುಚಿ ಬೀಳುತ್ತವೆ. ಆದರೆ ದೊಡ್ಡ ಜಹಜುಗಳು ಒಂದೆರಡು ಏಟು ತಿಂದು ಸ್ಥಿರವಾಗುತ್ತವೆ. ಅಂತೆಯೇ ಭಗವಂತನನ್ನು ಹಿಡಿದುಕೊಂಡಿರುವವನಿಗೆ ಶೋಕ ದುಃಖಗಳು ಬಂದರೂ ಅವನು ವಿಚಲಿತನಾಗುವುದಿಲ್ಲ. ಮೃತ್ಯುಶೋಕದಿಂದ ಪಾರಾಗಲು ಭಗವಂತನಲ್ಲಿ ಶರಣಾಗುವುದು ಒಂದು ಪರಿಣಾಮಕಾರಿ ಉಪಾಯ. ಮಾರ್ಕಂಡೇಯ ಮಹರ್ಷಿಗಳು ಶರಣಾಗತಿಯಿಂದಲೇ ಮೃತ್ಯುಂಜಯರಾದರು.

### ಮರಣ ಹೇಗಿರಬೇಕು ?

ಕಠೋಪನಿಷತ್ತಿನಲ್ಲಿ ಯಮನು ನಚಿಕೇತನಿಗೆ ಆತ್ಮತತ್ತ್ವವನ್ನು ಬೋಧಿಸುತ್ತಾನೆ. ಆತ್ಮಸಾಕ್ಷಾತ್ಕಾರವನ್ನು ಪಡೆಯದೆ ಇರುವವರು ಮರಣಾನಂತರ ತಮ್ಮ ತಮ್ಮ ಕರ್ಮಾನುಸಾರ ಬೇರೆ ಬೇರೆ ಯೋನಿಗಳನ್ನು ಪ್ರವೇಶಿಸುತ್ತಾರೆ: *(ಕಠ, ೨.೨.೭)*

**ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ।
ಸ್ಥಾಣುಮನ್ಯೇऽನುಸಂಯಂತಿ ಯಥಾಕರ್ಮ ಯಥಾಶ್ರುತಮ್ ॥**

ಇದರ ಅರ್ಥ, ವ್ಯಕ್ತಿ ತತ್ತ್ವಜ್ಞಾನದಿಂದ ಅಥವಾ ಏಕಾಂತಭಕ್ತಿಯಿಂದ ಮೃತ್ಯುರಹಸ್ಯವನ್ನು ಅರಿಯದಿದ್ದರೂ ಸತ್ಕರ್ಮಪರತೆಯಿಂದ ಮುಂದೆ ಉತ್ತಮ ಜನ್ಮಗಳನ್ನಾದರೂ ಪಡೆಯಬೇಕು. ಮಾತ್ರವಲ್ಲ, ಮೃತ್ಯುವಿನ ಗಳಿಗೆಯಲ್ಲಿನ ಮನಸ್ಥಿತಿಯು ವ್ಯಕ್ತಿಯ ಮುಂದಿನ ಗತಿಯನ್ನು ನಿರ್ಣಯಿಸುತ್ತದೆ. ಗೀತೆಯ ಎಂಟನೆಯ ಅಧ್ಯಾಯದಲ್ಲಿ ಭಗವಂತನು 'ಮರಣದ ಸಿದ್ಧತೆ'ಯನ್ನು ವಿಸ್ತಾರವಾಗಿ ಹೇಳಿರುವನು. ''ಅಂತಕಾಲದಲ್ಲಿ ನನ್ನನ್ನು ಸ್ಮರಿಸುತ್ತ ದೇಹವನ್ನು ತೊರೆಯುವವನು ನನ್ನ ಭಾವವನ್ನೇ ಪಡೆಯುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ನಾವು ಯಾವ ಯಾವ ಚಿಂತನೆ, ಭಾವನೆಯೊಂದಿಗೆ ದೇಹವನ್ನು ತ್ಯಜಿಸುತ್ತೇವೆಯೋ ಅದನ್ನೇ ಮುಂದಿನ ಜನ್ಮದಲ್ಲಿ ಪಡೆಯುತ್ತೇವೆ. ಆದ್ದರಿಂದ ಯಾವಾಗಲೂ ನನ್ನನ್ನು ಸ್ಮರಿಸುತ್ತ ಯುದ್ಧಮಾಡು. ನಿನ್ನ ಮನಸ್ಸು-ಬುದ್ಧಿಗಳನ್ನು ನನ್ನಲ್ಲಿ ಅರ್ಪಿಸು. ನೀನು ಖಂಡಿತ ನನ್ನನ್ನು ಪಡೆಯುವೆ.''

ಅಂತಿಮ ಗಳಿಗೆಯಲ್ಲಿ ಭಗವಂತನ ಸ್ಮರಣೆ ಬಹಳ ಮುಖ್ಯವಾದುದು. ಇಡೀ ಜೀವನದ ಅಭ್ಯಾಸದ ಹಿನ್ನೆಲೆಯಿದ್ದರೆ ಮಾತ್ರ ಅದು ಸಾಧ್ಯವಾಗುತ್ತದೆ. ಜೀವನವಿಡೀ ನಾವು ಜಗತ್ತಿನ ಚಿಂತನೆ ಮಾಡುತ್ತಿರುತ್ತೇವೆ. ಇನ್ನು ಅಂತಿಮ ಗಳಿಗೆಯಲ್ಲಿ ಭಗವತ್ ಸ್ಮರಣೆ ಬರಬೇಕೆಂದರೆ ಹೇಗೆ ಸಾಧ್ಯವಾಗುತ್ತದೆ? ಜೀವನದ ಸುಖ-ದುಃಖ, ಆಪತ್ತು-ವಿಪತ್ತಿನಲ್ಲಿ ಸದಾ ಭಗವಂತನನ್ನು ಸ್ಮರಿಸುವವನು ಮರಣ ಗಳಿಗೆಯಲ್ಲೂ ಭಗವಂತನನ್ನೇ ಕರೆಯುತ್ತಾನೆ. ಆದ್ದರಿಂದ ಮೃತ್ಯುವನ್ನು ಎದುರಿಸಲು ಇಡೀ ಜೀವನದ ಸಿದ್ಧತೆ ಬೇಕು.

ಸಾಧಕ ಮೃತ್ಯುವಿಗೆ ಹೆದರುವುದಿಲ್ಲ. ಮೃತ್ಯುವಿನಿಂದ ಪಾಠ ಕಲಿಯುತ್ತಾನೆ. ಅವನು ಮರಣದ ಚಿಂತನೆಯಿಂದ ವೈರಾಗ್ಯವನ್ನು ಹೆಚ್ಚಿಸಿಕೊಳ್ಳುತ್ತಾನೆ. ಅವನು ಯಾವಾಗಲೂ ಸಾವಿಗೆ ಸಿದ್ಧನಾಗಿರುತ್ತಾನೆ. ಮರಣ ಜೀವನದ ಅನಿಶ್ಚಿತತೆಯನ್ನು ಬಾರಿಬಾರಿಗೂ ನೆನಪಿಸಿಕೊಡುತ್ತದೆ. ಸಾಧಕನು ಸದಾ, 'ಇಂದಿನ ದಿನವೇ ನನ್ನ ಕೊನೆಯ ದಿನ' ಎಂದು ಭಾವಿಸಬೇಕು. ಆಗ ಅವನು ಎಚ್ಚರನಾಗುತ್ತಾನೆ, ಆಗ ಅವನು ದುಷ್ಕಾರ್ಯಗಳಿಂದ ಹಿಮ್ಮೆಟ್ಟುತ್ತಾನೆ. ಈ ಕುರಿತು Imitation of Christ ನಲ್ಲಿ ಹೀಗೆ ಹೇಳಲಾಗಿದೆ: ''ನೀವು ನಿಮ್ಮ ಎಲ್ಲ ಕೆಲಸ ಕಾರ್ಯ ಮತ್ತು ಚಿಂತನೆಗಳಲ್ಲಿ ಈಗಲೇ ಮೃತ್ಯು ಬರಲಿದೆ ಎಂಬಂತೆ ಇರಬೇಕು. ನೀವು ಪವಿತ್ರರಾಗಿದ್ದರೆ, ನಿಮ್ಮ ಮನಸ್ಸು ಶುದ್ಧವಾಗಿದ್ದರೆ ನಿಮಗೆ ಮೃತ್ಯುಭಯವಿರಲಾರದು. ನೀವು ಇಂದು ಮೃತ್ಯುವಿಗೆ ಸಿದ್ಧರಾಗದಿದ್ದರೆ, ನಾಳೆ ಹೇಗೆ ತಾನೆ ಸಿದ್ಧರಾಗುತ್ತೀರಿ? ನಾಳೆ ಅನಿಶ್ಚಿತವಾದುದು. ನಾಳೆ ನೀವು ಬದುಕಿರುತ್ತೀರಿ ಎಂದು ಏನು ನಂಬಿಕೆ ?''

ಯಾರು ಪ್ರತಿಕ್ಷಣ ಸಾಯಲು ಸಿದ್ಧನಾಗಿರುವನೋ ಅವನ ಜೀವನ ಧನ್ಯ. ಯಾರಾದರೂ ತೀರಿಕೊಳ್ಳುವುದನ್ನು ನೋಡಿದಾಗ ನಾಳೆ ನಮ್ಮ ದೇಹದ ಗತಿಯೂ ಇಷ್ಟೇ ಎಂದು ನೆನಪಿಟ್ಟುಕೊಳ್ಳಿ.

ಪ್ರತಿದಿನ ಬೆಳಗ್ಗೆ ನಾನು ರಾತ್ರಿಯವರೆಗೂ ಬದುಕಿರುತ್ತೇನೋ ಇಲ್ಲವೋ ಎಂಬುದನ್ನು ನೆನಪಿಸಿಕೊಳ್ಳಿರಿ. ಪ್ರತಿ ರಾತ್ರಿ ನಾನು ನಾಳೆ ಬೆಳಗಿನವರೆಗೆ ಬದುಕಿರುತ್ತೇನೋ ಇಲ್ಲವೋ ಎಂದು ಯೋಚಿಸಿ. ಮೃತ್ಯುವಿನ ಸ್ಮರಣೆಯಲ್ಲಿ ದಿನದಿನವೂ ಬದುಕಿ. 

# ಜಯಲಕ್ಷ್ಮಿ ಸಾರಾಬಾಯಿ ಮತ್ತು ಕೇಶರ್ ಬಾಯಿ

ಮೂಲ : 'Swami Vivekananda: The Great Inspirer', ರಾಮಕೃಷ್ಣ ಶಾರದಾ ಮಿಷನ್ ಪ್ರಕಟಣೆ
ಅನುವಾದ : ಸ್ವರ್ಣಗೌರಿ

## ಜಯಲಕ್ಷ್ಮಿ ಸಾರಾಬಾಯಿ

### ಸಾಹಿತಿ, ದೇಶಪ್ರೇಮಿ

**ಸ್ವಾ**ಮಿ ವಿವೇಕಾನಂದರು ಪಾಲಿತಾನಕ್ಕೆ ಭೇಟಿಯಿತ್ತಾಗ ದಿವಾನ್ ಚುನಿಲಾಲ್ ಸಾರಾಬಾಯಿ ಹಜರತ್‌ರ ಮನೆಯಲ್ಲಿ ತಂಗಿದ್ದರು. ವಿವಾಹವಾಗಿ ಮದರಾಸಿನಲ್ಲಿ ಪತಿಯ ಮನೆಯಲ್ಲಿದ್ದ ಹಜರತ್ ಮಗಳು ಜಯಲಕ್ಷ್ಮಿ ತನ್ನ ಪತಿಯೊಂದಿಗೆ ಸ್ವಾಮಿಗಳ ದರ್ಶನಕ್ಕೆ ಬಂದಿದ್ದಳು. ಆಧ್ಯಾತ್ಮಿಕ ವಿಚಾರಗಳಲ್ಲದೆ ಇತಿಹಾಸ, ಕೃಷಿ, ಭೂಗೋಳ, ಸಾಹಿತ್ಯ, ದೇಶದ ಏಳ್ಗೆ ಇತ್ಯಾದಿಗಳ ಬಗ್ಗೆಯೂ ಸ್ವಾಮೀಜಿ ಮನೆಯವರೊಡನೆ ಚರ್ಚಿಸುತ್ತಿದ್ದರು. ಹೀಗೆ ತಮ್ಮ ಮಾತುಕತೆ ವಿಚಾರಧಾರೆಗಳ ಮೂಲಕ ಸದಾ ಅವರ ಮನಸ್ಸನ್ನು ಉನ್ನತ ಸ್ಥಿತಿಗೊಯ್ದು ಆನಂದವೀಯುತ್ತಿದ್ದರು. ಮೂರು ದಿವಸಗಳ ನಂತರ ಸ್ವಾಮೀಜಿ ನಿರ್ಗಮಿಸಿದಾಗ ಎಲ್ಲರಿಗೂ ಅತೀವ ದುಃಖವುಂಟಾಯಿತು.

ಸ್ವಾಮಿ ವಿವೇಕಾನಂದರ ಶೀಲ ಮತ್ತು ವ್ಯಕ್ತಿತ್ವ ಜಯಲಕ್ಷ್ಮಿ ಹಾಗೂ ಆಕೆಯ ಪತಿಯ ಮೇಲೆ ಗಾಢವಾದ ಪ್ರಭಾವ ಬೀರಿತು. ಅವರಿಬ್ಬರೂ ೧೯೩೬ರ ಅಕ್ಟೋಬರ್‌ನಲ್ಲಿ ಕನ್ಯಾಕುಮಾರಿಗೆ ಭೇಟಿ ಯಿತ್ತರು. (ಸ್ವಾಮೀಜಿ ಅಲ್ಲಿಗೆ ಭೇಟಿ ನೀಡುವ ಇಚ್ಛೆಯನ್ನು ವ್ಯಕ್ತಪಡಿಸಿದ್ದರು.) ಜಯಲಕ್ಷ್ಮಿ ತಾನು 'ಪ್ರಬುದ್ಧ ಭಾರತ'ದ ಸದಸ್ಯಳಾಗಿದ್ದಲ್ಲದೆ, ಇತರರನ್ನೂ ಸದಸ್ಯರಾಗಲು ಪ್ರೇರೇಪಿಸುತ್ತಿದ್ದಳು. ಆಕೆ ಆಗರ್ಭ ಶ್ರೀಮಂತಳಾದರೂ ಸರಳತೆ, ವಿನಯ ಮತ್ತು ವೈರಾಗ್ಯಭಾವದಿಂದ ತುಂಬಿ ತುಳುಕುತ್ತಿದ್ದಳು. ಸಾಹಿತ್ಯದಲ್ಲಿ ಬಹಳ ಆಸಕ್ತಿಯಿದ್ದ ಕಾರಣ ಸ್ಥಳೀಯ ಜನರನ್ನು ಪ್ರೋತ್ಸಾಹಿಸಿ, ಆರ್ಥಿಕ ಸಹಾಯ ನೀಡಿ ಒಂದು ಪುಸ್ತಕಭಂಡಾರವನ್ನು ತೆರೆದಳು. ಸ್ವಾಮಿ ವಿವೇಕಾನಂದರನ್ನು ಆದರ್ಶವಾಗಿ ಸ್ವೀಕರಿಸಿ ಅವಳು ದೇಶಕ್ಕಾಗಿ ಜೀವನವನ್ನು ಅರ್ಪಿಸಲು ಯುವಕರನ್ನು ಹುರಿದುಂಬಿಸುತ್ತಿದ್ದಳು.

ಸ್ವಾಮೀಜಿಯವರ ವ್ಯಕ್ತಿತ್ವ ಕಿಂಚಿತ್ತಾದರೂ ಬದಲಾವಣೆ ತಾರದೆ ಹೋದೀತೆ?

*ಇನ್ನೊಬ್ಬರಿಗಾಗಿ ಮಾಡುವ ಕೆಲಸ ಅದೆಷ್ಟೇ ಕ್ಷುದ್ರವಾಗಿರಲಿ, ನಿನ್ನ ಸುಪ್ತಶಕ್ತಿಯನ್ನು ಜಾಗೃತಗೊಳಿಸುವುದು.*

*— ಸ್ವಾಮಿ ವಿವೇಕಾನಂದ (ಕೃತಿಶ್ರೇಣಿ ಸಂ. ೮, ಪು. ೧೪೯)*

## ಕೇಶರ್ ಬಾಯಿ

### ಶಕ್ತಿಯ ಅಂಶಗಳು

**ಭ**ಕ್ತಾಗ್ರೇಸರನಾದ ಬಟ್ಟೆ ವ್ಯಾಪಾರಿಯ ಪತ್ನಿ ಕೇಶರ್‌ಬಾಯಿ ವಿಧವೆಯಾಗಿದ್ದಳು. ಗುಜರಾತಿನ ಮಾಂಡವಿಯಲ್ಲಿ ವಾಸಿಸುತ್ತಿದ್ದ ಆಕೆಗೆ ಒಬ್ಬಳೇ ಮಗಳು. ಸಾಧು ಸಂತರೆಂದರೆ ಅತೀವ ಭಕ್ತಿಯಿದ್ದ ಆಕೆ ಆಗಾಗ್ಗೆ ಅವರನ್ನು ಸತ್ಕರಿಸುತ್ತಿದ್ದಳು. ಈ ಗುಣದಿಂದಾಗಿ ಒಮ್ಮೆ ಸ್ವಾಮಿ ವಿವೇಕಾನಂದರು ಅವರ ಮನೆಯಲ್ಲಿ ತಂಗುವ ಸೌಭಾಗ್ಯ ಆಕೆ ಒದಗಿಬಂದಿತು. ಅವರ ಮನೆಯಲ್ಲಿದ್ದಾಗ ಸ್ವಾಮೀಜಿ ನಿತ್ಯವೂ ಅದೆಷ್ಟು ಮನಮೋಹಕವಾಗಿ ಹಾಡುತ್ತಿದ್ದರೆಂದರೆ ನೆರೆಹೊರೆಯ ಹೆಂಗಸರೆಲ್ಲರೂ ಆ ಗಾನಮಾಧುರ್ಯಕ್ಕೆ ಆಕರ್ಷಿತರಾಗಿ ಸ್ವಾಮೀಜಿಯವರನ್ನು ಸುತ್ತುವರಿಯುತ್ತಿದ್ದರು. ಒಮ್ಮೆ ಸ್ವಾಮೀಜಿ ಅವರನ್ನು ಕುರಿತು, ''ತಾಯಂದಿರಾ, ನೀವೆಲ್ಲರೂ ಶಕ್ತಿಯ ಅಂಶಗಳು. ನೀವುಗಳು ಸಕ್ರಿಯವಾಗಿ ಪಾಲ್ಗೊಳ್ಳದಿದ್ದರೆ ನಮ್ಮ ದೇಶ ಜಾಗೃತವಾಗುವುದಿಲ್ಲ. ದೇಶಕ್ಕೆ ಅರ್ಪಿತವಾಗದ ಜೀವನ ಸುಮ್ಮನೆ ವ್ಯರ್ಥ. ಹಸಿರಾಗಿದ್ದಾಗ ಎಲೆಯು ಉಪಯೋಗಕ್ಕೆ ಬರುವುದು. ಒಣಗಿದ ನಂತರ ಅವನ್ನು ಎಸೆಯುತ್ತಾರೆ ಅಥವಾ ಸುಡುತ್ತಾರೆ. ಜೀವನ ಒಂದೇ ಬಾರಿ ಬರುವುದು. ಅದನ್ನು ಸಾರ್ಥಕಗೊಳಿಸಿಕೊಳ್ಳಿ'' ಎಂದು ಹುರಿದುಂಬಿಸಿದರು.

ಸ್ವಾಮಿ ವಿವೇಕಾನಂದರ ನಿರ್ಗಮನದ ನಂತರ ಕೇಶರ್‌ಬಾಯಿ ಸ್ವಾಮೀಜಿಯವರನ್ನು ಹಾಗೂ ಅವರ ಸ್ಫೂರ್ತಿದಾಯಕ ನುಡಿಗಳನ್ನು ಸಂಪೂರ್ಣವಾಗಿ ಮರತೇಬಿಟ್ಟಳು. ದಿನಗಳು ಉರುಳಿದಂತೆ ಒಂದು ದಿನ ಕೇಶರ್‌ಬಾಯಿ ತನ್ನ ಒಬ್ಬಳೇ ಮಗಳನ್ನು ಕಳೆದುಕೊಂಡು ಹುಚ್ಚಿಯಂತಾದಳು. ದುಃಖತಪ್ತ ಕೇಶರ್‌ಬಾಯಿ ಪೋರ್‌ಬಂದರಿನಲ್ಲಿದ್ದ ತವರು ಮನೆಗೆ ಹೋದಳು. ಅಲ್ಲಿ ಗಾಂಧೀಜಿಯವರ ಉಪನ್ಯಾಸಗಳನ್ನು ಕೇಳಿ, ಸ್ವಾಮೀಜಿಯವರ ನುಡಿಗಳ ನೆನಪಾಯಿತು. ಅಂದಿನಿಂದ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ, ತನ್ನ ಜೀವನವನ್ನು ಆ ಮಹಾಯೋಗಿಯ ವಾಣಿಗೆ ಅನುಸಾರವಾಗಿ ರೂಪಿಸಿಕೊಂಡು ಸಾರ್ಥಕ್ಯ ಪಡೆದಳು.

*'ವಿಶ್ವವ್ಯಕ್ತಿತ್ವ ಪಡೆಯಬೇಕಾದರೆ ಈ ಕ್ಷುದ್ರ ಸೆರೆಬಿದ್ದ ವ್ಯಕ್ತಿತ್ವ ಹೋಗಬೇಕು' — ಸ್ವಾಮಿ ವಿವೇಕಾನಂದ (ಕೃತಿಶ್ರೇಣಿ, ಸಂ.೧, ಪು.೧೭)*

ಸ್ವಾಮಿ ವಿವೇಕಾನಂದರ ಶಿಷ್ಯ

# ಶರತ್‌ಚಂದ್ರ ಚಕ್ರವರ್ತಿ

ಇಂಗ್ಲಿಷ್ ಮೂಲ : **ಛಾಯಾ ಬ್ಯಾನರ್ಜಿ** ಸಂಗ್ರಹಾನುವಾದ: **ಸ್ವರ್ಣಗೌರಿ**

ಭಾಗ ೨

ಒಂದು ದಿನ ಭಟ್ಟಾಚಾರ್ಯನು ಸ್ವಾಮೀಜಿಯವರೊಡನೆ ನೀಲಾಂಬರ ಮುಖರ್ಜಿ ತೋಟದ ಮನೆಯಲ್ಲಿ ರಾತ್ರಿ ತಂಗಿದ್ದನು. ಸ್ವಾಮೀಜಿ ಸಾಕ್ಷಾತ್ ಶಿವ ಎಂಬುದಾಗಿ ಸ್ವಪ್ನವಾಗಿತ್ತು ಶಿಷ್ಯನಿಗೆ. ಆ ವೃತ್ತಾಂತವನ್ನು ಸ್ಮರಿಸಿಕೊಂಡು ಸ್ವಾಮಿಗಳ ಪಾದಪದ್ಮವನ್ನು ಅರ್ಚನೆ ಮಾಡುವುದಕ್ಕೋಸ್ಕರ ಅವನ ಮನಸ್ಸು ಕಾತರಗೊಂಡಿತು. ಈ ಅಭಿಪ್ರಾಯವನ್ನು ತಿಳಿಸಿ ಸ್ವಾಮೀಜಿಯವರ ಅನುಮತಿಯನ್ನು ಬೇಡಿದನು. ಅವನ ವಿಶೇಷವಾದ ಒತ್ತಾಯದಿಂದ ಸ್ವಾಮೀಜಿ ಒಪ್ಪಿಕೊಂಡರು. ಶಿಷ್ಯನು ಕೆಲವು ಪುಷ್ಪಗಳನ್ನು ತೆಗೆದುಕೊಂಡು ಬಂದು, ಸ್ವಾಮಿಗಳ ದೇಹದಲ್ಲಿ ಮಹಾಶಿವನ ಅಧಿಷ್ಠಾನವನ್ನು ಭಾವಿಸುತ್ತಾ ವಿಧ್ಯುಕ್ತವಾದ ರೀತಿಯಲ್ಲಿ ಅವರನ್ನು ಪೂಜಿಸಿದನು.

ಪೂಜೆ ಮುಗಿದ ಮೇಲೆ ಸ್ವಾಮೀಜಿ ಶಿಷ್ಯನನ್ನು ಕುರಿತು, ''ನಿನ್ನ ಪೂಜೆಯೇನೋ ಆಗಿಹೋಯಿತು; ಆದರೆ ಬಾಬು ರಾಮ (ಸ್ವಾಮಿ ಪ್ರೇಮಾನಂದರು) ಬಂದು ನಿನ್ನನ್ನು ಈಗ ನುಂಗಿಹಾಕಿ ಬಿಡುತ್ತಾನೆ! ನೀನು ಪರಮಹಂಸರ ಪೂಜೆಗೆ ಇಟ್ಟುಕೊಳ್ಳುವ ಹೂವಿನ ಪಾತ್ರೆಯಲ್ಲಿ ನನ್ನ ಕಾಲನ್ನು ಇಟ್ಟು ಪೂಜೆ ಮಾಡಿದೆ ಅಲ್ಲವೆ?'' ಎಂದರು. ಮಾತು ಮುಗಿಯಿತೋ ಇಲ್ಲವೋ, ಅಷ್ಟರೊಳಗೆ ಪ್ರೇಮಾನಂದ ಸ್ವಾಮಿಗಳು ಅಲ್ಲಿಗೆ ಬಂದರು. ಸ್ವಾಮೀಜಿ ಅವರಿಗೆ, ''ಅಯ್ಯೋ! ನೋಡು, ಇಂದು ಏನು ಭಯಂಕರವಾದ ಕೆಲಸವನ್ನು ಮಾಡಿ ಬಿಟ್ಟಿದ್ದಾನೆ! ಪರಮಹಂಸರ ಪೂಜೆಯ ತಟ್ಟೆಯಲ್ಲಿ ಸುಗಂಧ ಮುಂತಾದುವನ್ನೆಲ್ಲಾ ತಂದು ಇವತ್ತು ನನ್ನ ಪೂಜೆ ಮಾಡಿದ್ದಾನೆ'' ಎಂದು ಹೇಳಿಬಿಟ್ಟರು. ಪ್ರೇಮಾನಂದ ಸ್ವಾಮಿಗಳು ನಗುನಗುತ್ತ, ''ಅವನು ಮಾಡಿದ್ದು ಸರಿ ತಾನೆ; ನೀನೂ ಪರಮಹಂಸರೂ ಬೇರೆ ಬೇರೆಯೇನು?'' ಎಂದರು. ಈ ಮಾತನ್ನು ಕೇಳಿ ಶಿಷ್ಯನು ನಿರ್ಭಯನಾದನು.

ಕ್ರಿ.ಶ. ೧೮೯೭ನೇ ವರ್ಷದ ಸೂರ್ಯಗ್ರಹಣದ ದಿನ. ಕೆಲವು ದಿನಗಳಿಂದ ಸ್ವಾಮಿಗಳು ಬಾಗ್‌ಬಜಾರಿನ ಬಲರಾಮ ಬಸುಗಳ ಮನೆಯಲ್ಲಿ ವಾಸಿಸುತ್ತಿದ್ದರು. ಈ ದಿನ ಬಲರಾಮನ ಮನೆಯ ಹೆಂಗಸರು ಯಾರೂ ಇರಲಿಲ್ಲ. ಮನೆ ಪೂರ್ತಿ ಬಿಡುವಾಗಿತ್ತು. ಶಿಷ್ಯನಿಗೆ ತನ್ನ ದೇಶದ ಅಡಿಗೆಯನ್ನು ತನ್ನ ಕೈಯಿಂದಲೇ ಮಾಡಿ ಬಡಿಸಲು ಸ್ವಾಮಿಗಳ ಅಪ್ಪಣೆಯಾಗಿತ್ತು. ಗ್ರಹಣಕ್ಕೆ ಮುಂಚೆಯೇ ತಿನ್ನುವುದು ಕುಡಿಯುವುದು ಎಲ್ಲಾ ಮುಗಿದು ಹೋಗಿರಬೇಕಿತ್ತು. ಇನ್ನೂ ಸ್ವಲ್ಪ ಅಡಿಗೆ ಮುಗಿಯುವಷ್ಟರಲ್ಲಿ ಸ್ವಾಮೀಜಿ ಚಿಕ್ಕ ಹುಡುಗರಂತೆ, ''ಏನಾಗಿದೆಯೋ ಅದನ್ನೇ ಬೇಗ ತಂದುಹಾಕಿ ಬಿಡು, ಇನ್ನು ನಾನು ಕಾದುಕೊಂಡಿರಲಾರೆ, ಹೊಟ್ಟೆಹಸಿವಿನಿಂದ ಉರಿದು ಹೋಗುತ್ತಿದ್ದೇನೆ'' ಎಂದು ತಾವೇ ಎಲೆ ಹಾಕಿಕೊಂಡು ಊಟಕ್ಕೆ ಕುಳಿತೇಬಿಟ್ಟರು. ಗಡಿಬಿಡಿಯಿಂದ ಬಡಿಸುತ್ತಿದ್ದ ಶಿಷ್ಯನು ಯಾವತ್ತೂ ಅಡಿಗೆಯಲ್ಲಿ ಬುದ್ಧಿವಂತನೆನಿಸಿಕೊಂಡವನಲ್ಲ. ಆದರೂ ಆ ದಿನ ಸ್ವಾಮಿಗಳ ಮೆಚ್ಚುಗೆಯನ್ನು ಗಳಿಸಿದ! ಊಟದ ನಂತರ ವಿಶ್ರಮಿಸುತ್ತಿದ್ದ ಗುರುಗಳ ಪಾದ ಒತ್ತುವ ಸೇವೆಯೂ ದೊರೆತು, ಈ ಪುಣ್ಯಕಾಲದಲ್ಲಿ ಗುರುಪದ ಸೇವೆಯೇ ನನಗೆ ಗಂಗಾಸ್ನಾನ ಮತ್ತು ಜಪವೆಂದು ಭಾವಿಸಿ ಸಂತೃಪ್ತನಾದ.

ಅನಂತರ ಎಲ್ಲರೂ ಸ್ವಾಮೀಜಿಯವರ ಬಳಿ ಸೇರಿದರು. ಉಪನಿಷತ್ ಕುರಿತು ಏನಾದರೂ ಹೇಳುವಂತೆ ಅಪ್ಪಣೆ ಮಾಡಿದರು ಶಿಷ್ಯನಿಗೆ. ಅವನು ಈ ಹಿಂದೆ ಎಂದೂ ಸ್ವಾಮೀಜಿ ಮುಂದೆ ಉಪನ್ಯಾಸ ಮಾಡಿದ್ದಿಲ್ಲ. ಡವಡವನೆ ಹೊಡೆದುಕೊಳ್ಳುತ್ತಿದ್ದ ಎದೆಯೊಂದಿಗೆ ಎದ್ದು ನಿಂತು, **'ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ'** ಎಂಬ ಮಂತ್ರವನ್ನು ವಿವರಿಸಿ, ಗುರುಭಕ್ತಿ, ತ್ಯಾಗದ ಮಹಿಮೆ ಇವನ್ನು ವರ್ಣಿಸಿ, ಬ್ರಹ್ಮಜ್ಞಾನವೇ ಪರಮ ಪುರುಷಾರ್ಥ ಎಂಬುದನ್ನು ವಿಚಾರಮಾಡಿ ಕುಳಿತನು. ಸ್ವಾಮೀಜಿ ಪುನಃ ಪುನಃ ಚಪ್ಪಾಳೆ ತಟ್ಟುವುದರ ಮೂಲಕ ಶಿಷ್ಯನನ್ನು ಪ್ರೋತ್ಸಾಹಿಸಿ, ''ಆಹಾ! ಬಲು ಸೊಗಸಾಗಿ ಹೇಳಿದೆ'' ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ರಾಮಕೃಷ್ಣ ಮಹಾಸಂಘದ ಪ್ರಪ್ರಥಮ ಮಾಸಪತ್ರಿಕೆಯಾದ 'ಉದ್ಬೋಧನ'ವು ಕ್ರಿ.ಶ.೧೮೯೯ರಲ್ಲಿ ಸ್ವಾಮಿ ತ್ರಿಗುಣಾತೀತಾನಂದರ ಸಂಪಾದಕತ್ವದಲ್ಲಿ ಪ್ರಾರಂಭವಾಯಿತು. ಶರತ್‌ಚಂದ್ರನನ್ನು ಅದರ ಸಂಪಾದಕನನ್ನಾಗಿ ಮಾಡಬೇಕೆಂದು ಸ್ವಾಮಿಗಳ ಇಚ್ಛೆಯಾಗಿತ್ತು. ಆದರೆ ತನಗೆ ವೃತ್ತಿಯಲ್ಲಿ ಆಗಾಗ್ಗೆ ವರ್ಗಾವಣೆ ಆಗುತ್ತಿದ್ದುದರಿಂದ ಶಿಷ್ಯನು ಅದನ್ನು ನಿರಾಕರಿಸಿದನು.

ಕ್ರಿ.ಶ. ೧೮೯೭ರ ಮೇ ಒಂದನೇ ತಾರೀಖು ರಾಮಕೃಷ್ಣ ಮಿಷನ್ ಮಹಾಸಂಘದ ಸ್ಥಾಪನೆಯಾಯಿತು. ಬಲರಾಮ ಬಾಬುವಿನ ಮನೆಯಲ್ಲಿ ಪ್ರಥಮ ಅಧಿವೇಶನ ನಡೆಯಿತು. ಕಾರ್ಯಸಮಿತಿಯ ರಚನೆಯಲ್ಲಿ ಶರತ್‌ಚಂದ್ರನು ಶಾಸ್ತ್ರಪಾಠಕನಾಗಿ ಚುನಾಯಿಸಲ್ಪಟ್ಟನು. ಆದ್ದರಿಂದ ಸ್ವಾಮೀಜಿ ಸ್ವತಃ ಆತನಿಗೆ ಋಗ್ವೇದ ಪಾಠ ಹೇಳಿಕೊಡಲು ಪ್ರಾರಂಭಿಸಿದರು. ಸಾಕ್ಷಾತ್ ಶಿವನಿಂದಲೇ ವೇದ ಪಾಠವಾದ ಶಿಷ್ಯನು ಪ್ರಶ್ನೆ, ಚರ್ಚೆಗಳ ಮೂಲಕ ಸಾಂಖ್ಯ, ಯೋಗ, ಗೀತೆ, ಸಾಯಣರ ವೇದಭಾಷ್ಯ ಮುಂತಾದವುಗಳಲ್ಲಿ ಹೊಸ ಬೆಳಕನ್ನು ಕಂಡನು. ಗುರುವಿನ ಆದೇಶದಂತೆ ವೇದಾಂತ ಸೂತ್ರಗಳ ಮೇಲೆ ಸ್ವತಂತ್ರವಾಗಿ ಭಾಷ್ಯವನ್ನು ಬರೆದನು. ವಿವೇಕ-ಭಾಷ್ಯ

ಎಂಬ ಹೆಸರಿನಲ್ಲಿ ಅದು ಪ್ರಕಟಗೊಂಡಿತು. ಸತ್ಯದ ಪ್ರಾಮಾಣಿಕ ಅನ್ವೇಷಕನಂತೆ ಗುರುವಿನ ಹೇಳಿಕೆಗಳನ್ನು ಪ್ರಶ್ನಿಸುವುದರ ಮೂಲಕ ಸ್ತ್ರೀಶಿಕ್ಷಣ, ಅನಕ್ಷರತೆ, ಜಾತಿಪದ್ಧತಿ, ಬಡತನ, ಮೂಢನಂಬಿಕೆ ಇತ್ಯಾದಿ ವಿಷಯಗಳ ಕುರಿತು ಸ್ವಾಮೀಜಿಯವರ ಅಭಿಪ್ರಾಯ ಗಳನ್ನು ಹೊರಗೆಡಹಿದನು.

ಶ್ರೀರಾಮಕೃಷ್ಣರ ಗೃಹೀ ಭಕ್ತ, ನಾಟಕಕಾರ ಹಾಗೂ ಕವಿಯೂ ಆದ ಗಿರೀಶ್‌ಚಂದ್ರ ಘೋಷನು ಒಣವೇದಾಂತ ಚರ್ಚೆಗಳನ್ನು ಮಾಡುತ್ತಿರಲಿಲ್ಲ. ಅವನ ಪಾಲಿಗೆ ಶ್ರೀರಾಮಕೃಷ್ಣರು ವೇದ ವೇದಾಂತಗಳ ಸ್ವರೂಪವೇ ಆಗಿದ್ದರು. ಆದ್ದರಿಂದ ಸ್ವಾಮೀಜಿ ಯವರೊಡನೆ ಶರತ್‌ಚಂದ್ರನು ಕೊನೆಮೊದಲಿಲ್ಲದೆ ಮಾಡುತ್ತಿದ್ದ ವೇದಾಂತ ಚರ್ಚೆ ಗಿರೀಶನಿಗೆ ಹಿಡಿಸುತ್ತಿರಲಿಲ್ಲ. ನಮ್ಮ ದೇಶದಲ್ಲಿರುವ ಘೋರವಾದ ಹಾಹಾಕಾರ, ಹೊಟ್ಟೆಗಿಲ್ಲದಿರುವಿಕೆ, ವ್ಯಭಿಚಾರ, ಶಿಶು ಹತ್ಯೆ ಮುಂತಾದ ಮಹಾಪಾಪಗಳ ನಿವಾರಣೆಗೆ ವೇದದಲ್ಲಿ ಏನಾ ದರೂ ಹೇಳಿರುವುದೇನು? ಎಂದು ವಾದಿಸುತ್ತಿದ್ದನು. ಸಮಾಜದ ಭಯಂಕರವಾದ ಚಿತ್ರಗಳನ್ನು ಗಿರೀಶನು ಬಿಡಿಸಿ ತೋರಲು ಮೊದಲು ಮಾಡಿದೊಡನೆ ಸ್ವಾಮಿ ವಿವೇಕಾನಂದರ ಕಣ್ಣುಗಳೂ ಹನಿಗೂಡುತ್ತಿದ್ದವು, ಮಾತೇ ಹೊರಡದೆ ಕುಳಿತುಬಿಡುತ್ತಿದ್ದರು. ಈ ದೃಶ್ಯವು ಶಿಷ್ಯನ ಮನಃಪಟಲದ ಮೇಲೆ ತೀವ್ರ ಪರಿಣಾಮವುಂಟು ಮಾಡಿ ಅವನನ್ನು ಮಾನವಪ್ರೇಮಿಯಾಗಿ ಪರಿವರ್ತಿಸಿತು.

ಕ್ರಿ.ಶ. ೧೯೦೧ರಲ್ಲಿ ಸ್ವಾಮೀಜಿ ಪಾಶ್ಚಾತ್ಯ ದೇಶಗಳ ಎರಡನೇ ಬಾರಿಯ ಪರ್ಯಟನೆ ಮುಗಿಸಿ ಹಿಂತಿರುಗಿ ಬಂದಾಗ ಮತ್ತೆ ಗುರುವಿನೊಡನೆ ಅನೇಕ ವಿಷಯಗಳ ಕುರಿತು ಚರ್ಚಿಸಲು ಅವ ಕಾಶ ದೊರೆಯಿತು. ಅನೇಕ ಬಾರಿ ಗುರುವಿನೊಡನೆ ಸಂಸ್ಕೃತದಲ್ಲೇ ಪತ್ರವಿನಿಮಯ ಮಾಡುತ್ತಿದ್ದನು. ಶಿಷ್ಯನ ಸಂಸ್ಕೃತ ಪಾಂಡಿತ್ಯ ಪರೀಕ್ಷಿಸಲು ಸ್ವಾಮೀಜಿ ಒಮ್ಮೊಮ್ಮೆ ಆತನನ್ನು ಕರೆದು ಸಂಸ್ಕೃತದಲ್ಲಿ ಸಂಭಾಷಣೆ ನಡೆಸುತ್ತಿದ್ದರು.

ಕ್ರಿ.ಶ. ೧೯೦೧ರಲ್ಲಿ ಸ್ವಾಮೀಜಿಯವರು ಅನಾರೋಗ್ಯದಿಂದ ನರಳುತ್ತಿದ್ದಾಗ ಅವರ ಶುಶ್ರೂಷೆ, ರಾತ್ರಿ ಪಹರೆ ಹೀಗೆ ನಾನಾ ವಿಧ ದಲ್ಲಿ ಗುರುಸೇವೆ ಮಾಡಿ ಧನ್ಯನಾದನು. ಕ್ರಿ.ಶ. ೧೯೦೨ರ ಜುಲೈ ೪ ರಂದು ಗುರುಗಳ ಮಹಾಸಮಾಧಿಯ ವಿಚಾರ ಶರತ್‌ಚಂದ್ರನನ್ನು ಶೋಕಸಾಗರದಲ್ಲಿ ಮುಳುಗಿಸಿತು. ಆದರೆ ಕರ್ತವ್ಯ ಬಾಧೆಗಳು ಅವ ನನ್ನು ಸಂಸಾರದಲ್ಲಿರಿಸಿತು. ತನ್ನ ಮನದ ವ್ಯಥೆಯನ್ನು ಬಂಗಾಳಿ ಮಾಸಪತ್ರಿಕೆ 'ಉದ್ಬೋಧನ'ದಲ್ಲಿ ಲೇಖನಗಳ ಮೂಲಕ ವ್ಯಕ್ತಪಡಿಸಿ ದನು.

ತನ್ನ ಆಧ್ಯಾತ್ಮಿಕ ಜೀವನವನ್ನು ಉದ್ಧರಿಸಿದ ಈ ವಿಶ್ವಗುರುವಿನ ಬಳಿಗೆ ಕರೆತಂದ ದೇವಮಾನವರಾದ ನಾಗಮಹಾಶಯರ ಅಂತಿಮ ದಿನಗಳಲ್ಲೂ ಸ್ವಂತ ಮಗನಂತೆ, ಹದಿಮೂರು ದಿನಗಳ ಕಾಲ ಅವರ ಬಳಿಯೇ ಇದ್ದು ಸೇವೆ ಮಾಡಿದನು. ಕೊನೆ ಘಳಿಗೆಯಲ್ಲಿ ಪವಿತ್ರ ಗಂಗಾಜಲವನ್ನು ಕುಡಿಸಿ, ಗೀತೆ ಪಠಿಸಿ, ಅಂತ್ಯಕ್ರಿಯೆಯನ್ನು ತಾನೇ ನೆರವೇರಿಸಿದನು.

**ಧಾರ್ಮಿಕ ಕುಟುಂಬ:** ವೃತ್ತಿಯ ದೆಸೆಯಿಂದ ವರ್ಗಾವಣೆ ಗಳಾಗುತ್ತಿದ್ದರೂ, ಶರತ್‌ಚಂದ್ರನ ಪಾಲಿಗೆ ಮಾತ್ರ ಹೊಟ್ಟೆಪಾಡಿನ ವೃತ್ತಿ ಗೌಣವಾಗಿ, ಸಾಧುಸೇವೆಯೇ ಎಲ್ಲಿಹೋದರೂ ಮುಖ್ಯವಾಗು ತ್ತಿತ್ತು. ವಿವೇಕಯುಕ್ತ ಜೀವನ ನಡೆಸುತ್ತಾ ಸದಾ ಸಂತೃಪ್ತನಾಗಿರು ತ್ತಿದ್ದ. ಬ್ಯಾರಕ್‌ಪುರದ ಅಂಚೆ ಕಛೇರಿಯಲ್ಲಿ ಡೆಪ್ಯುಟಿ ಪೋಸ್ಟ್ ಮಾಸ್ಟರ್ ಹುದ್ದೆಯಿಂದ ಪ್ರಾರಂಭಿಸಿದ ಆತನಿಗೆ ಕೆಲವು ವರ್ಷಗಳ ನಂತರ ಪೋಸ್ಟ್ ಮಾಸ್ಟರ್ ಹುದ್ದೆಗೆ ಬಡ್ತಿ ದೊರೆಯಿತು. ನಿವೃತ್ತಿಯ ವರೆಗೂ ಮತ್ತೊಂದು ಬಡ್ತಿ ದೊರೆಯಲಿಲ್ಲ. ಬಂಗಾಳ, ಬಿಹಾರ್, ಒರಿಸ್ಸಾ ಮುಂತಾದ ರಾಜ್ಯಗಳಲ್ಲಿ ವೃತ್ತಿಸೇವೆ ಸಲ್ಲಿಸುತ್ತಾ ಶ್ರೀರಾಮ ಕೃಷ್ಣ-ವಿವೇಕಾನಂದ ಭಾವಪ್ರಚಾರ ಕಾರ್ಯದಲ್ಲಿ ತೊಡಗಿಸಿ ಕೊಂಡನು. ಕ್ರಿ.ಶ. ೧೯೩೩ ರಲ್ಲಿ ರಾಜ್ಯದ ಕಟಕ್ ಪ್ರದೇಶದ ಅಂಚೆ ಕಛೇರಿಯಿಂದ ನಿವೃತ್ತನಾದನು. ಅವನ ಸ್ವತಂತ್ರ ಆಲೋಚನೆಗಳು ಬರವಣಿಗೆಯ ಮೂಲಕ ವ್ಯಕ್ತವಾಗುತ್ತಿದ್ದವು. ಅವನಿಗೆ ಇಂಗ್ಲಿಷ್, ಬಂಗಾಳಿ, ಸಂಸ್ಕೃತ, ಹಿಂದಿ ಭಾಷೆಗಳಲ್ಲಿ ನಿರರ್ಗಳವಾಗಿ ಮಾತ ನಾಡುವ ಪ್ರಭುತ್ವವಿತ್ತು.

ಕೇವಲ ಹಾಡುಗಳನ್ನು ರಚಿಸುವುದಲ್ಲದೆ ಮಧುರ ಕಂಠದಲ್ಲಿ ಹಾಡುತ್ತಿದ್ದನು. ಹಿರಿಯ ಮಗಳು ಇಂದಿರೆಗೆ ಹಾಗೂ ಮಗ ಜಯ ಚಂದ್ರನಿಗೂ ಈ ಸಂಗೀತ ಕಲೆಯು ಹರಡಿತ್ತು. ಜಯಚಂದ್ರನು ಸಂಗೀತವಲ್ಲದೆ ಚಿತ್ರಕಲೆಯನ್ನೂ ಮೈಗೂಡಿಸಿಕೊಂಡಿದ್ದನು. ತಂದೆ ರಚಿಸಿದ ಶ್ರೀರಾಮಕೃಷ್ಣರ ಜೀವನಾಧಾರಿತ 'ಶ್ರೀರಾಮಕೃಷ್ಣ ಪಾಂಚಾಲಿ' ಯನ್ನು ಮಕ್ಕಳು ಪ್ರತಿ ಮಂಗಳವಾರ ಹಾಗೂ ಶನಿವಾರ ಒಟ್ಟುಗೂಡಿ ಸಂತೋಷದಿಂದ ಹಾಡುತ್ತಿದ್ದರು. ಶ್ರೀರಾಮಕೃಷ್ಣರ ನಿತ್ಯಪೂಜೆಗೆ ಮನೆಯಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಈಗಲೂ ಈತನ ಕುಟುಂಬದಲ್ಲಿ ಶ್ರೀರಾಮಕೃಷ್ಣರ ಜಯಂತಿಯ ದಿನ ಮಕ್ಕಳು, ಮೊಮ್ಮಕ್ಕಳು 'ಪಾಂಚಾಲಿ' ಹಾಡುತ್ತಾರೆ. ಮನೆಯ ಯಜಮಾನನ ಆಧ್ಯಾತ್ಮಿಕ, ಧಾರ್ಮಿಕ ಪ್ರವೃತ್ತಿ ಮನೆಯವರೆಲ್ಲರ ಮೇಲೂ ಪ್ರಭಾವ ಬೀರಿತ್ತು. ಮನೆಯಲ್ಲಿ ಆಧ್ಯಾತ್ಮಿಕ ವಾತಾವರಣವಿದ್ದರೆ, ಸಾಧುಸಂತರು ಭೇಟಿ ನೀಡುತ್ತಿದ್ದರೆ, ಅದು ಮನೆಯ ಸದಸ್ಯರನ್ನು ಧಾರ್ಮಿಕರನ್ನಾಗಿ ಮಾಡುವುದೆಂದು ಆತ ನಂಬಿದ್ದ. ಆದ್ದರಿಂದ ಎಂದೂ ತನ್ನ ಧಾರ್ಮಿಕ ಅಭಿಪ್ರಾಯಗಳನ್ನು ಮನೆಯವರ ಮೇಲೆ ಹೇರುತ್ತಿರಲಿಲ್ಲ. ಪ್ರತಿನಿತ್ಯ ಸಂಜೆಯ ವೇಳೆಯಲ್ಲಿ ಮನೆಯವರೆಲ್ಲ ಒಟ್ಟಿಗೆ ಕುಳಿತು ಭಜನೆ ಮಾಡುತ್ತಿದ್ದರು. ಒಟ್ಟಿನಲ್ಲಿ , ಅದೊಂದು ಭಕ್ತರ ಕುಟುಂಬವಾಗಿತ್ತು.

**ಯುವಜನಾಂಗಕ್ಕೆ ಪ್ರೋತ್ಸಾಹ:** ಸ್ವಾಮಿ ವಿವೇಕಾನಂದರ ಆದರ್ಶ ಹಾಗೂ ಸಿಡಿಲವಾಣಿಯಿಂದ ಪ್ರೇರೇಪಿತರಾದ ಬಂಗಾಳದ ಯುವಕರು ಭಾರತದ ರಾಜಕೀಯ ಸ್ವಾತಂತ್ರ್ಯಕ್ಕಾಗಿ ಹೋರಾಟಕ್ಕಿಳಿ ದಿದ್ದರು. ಸ್ವಾಮಿ ವಿವೇಕಾನಂದರು ನೇರವಾಗಿ ರಾಜಕೀಯ ಆಂದೋಳನದಲ್ಲಿ ಭಾಗವಹಿಸದಿದ್ದರೂ ಅವರ ಕೆಚ್ಚೆದೆಯ ನುಡಿ ಗಳು ರಾಜಕಾರಣಿಗಳಿಗೆ ಹಾಗೂ ಸ್ವಾತಂತ್ರ್ಯ ಹೋರಾಟಗಾರರ ಧಮನಿಗಳಲ್ಲಿ ಉತ್ಸಾಹ ತುಂಬುತ್ತಿದ್ದವು. ಶರತ್‌ಚಂದ್ರರ ಸ್ವಾಮಿ ವಿವೇಕಾನಂದರ ಸಂಭಾಷಣೆಗಳನ್ನು ಯುವಕರು ಮತ್ತೆ ಮತ್ತೆ

ಓದುತ್ತಾ, ತಮ್ಮ ತಮ್ಮಲ್ಲೇ ಚರ್ಚಿಸುತ್ತಿದ್ದರು. ಮಹಾನ್ ಸ್ವಾತಂತ್ರ್ಯ ಹೋರಾಟಗಾರ ಸುಭಾಷ್‌ಚಂದ್ರ ಬೋಸರು ಈ ಪುಸ್ತಕದಿಂದ ಪ್ರೇರಣೆ ಪಡೆದಿದ್ದರು. ಹಾಡುಕವಿ ಮುಕುಂದ ದಾಸರು ಕಾವಿಬಟ್ಟೆ ತೊಟ್ಟು, ತಲೆಗೆ ರುಮಾಲು ಸುತ್ತಿ, ಹಳ್ಳಿಯಿಂದ ಹಳ್ಳಿಗೆ ಸ್ವಾಮೀಜಿಯವರ ಉಪದೇಶಗಳನ್ನು ಹಾಡುತ್ತಾ ತಿರುಗುತ್ತಿದ್ದರು. ಆ ಮಧುರ ಕಂಠವು ಜನರಲ್ಲಿ ಉತ್ಸಾಹ ಮೂಡಿಸಿ, ಹೊಸ ಭಾವನೆಗಳನ್ನು ಚಿಮ್ಮಿಸುತ್ತಿದ್ದವು. ಹಳ್ಳಿಗಳ ನಾಟಕಗಳಲ್ಲಿ ಶರತ್‌ಚಂದ್ರನು ರಚಿಸಿದ ಹಾಡುಗಳನ್ನು ಹಾಡುತ್ತಾ ಜನಮನ ಗೆಲ್ಲುತ್ತಿದ್ದರು. ಇವು ಭಾರತ ರಾಜಕೀಯ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ ಹಾಡುಗಳಾಗಿದ್ದರಿಂದ ಇವರೀರ್ವರೂ ಬ್ರಿಟಿಷರ ಕೆಂಗಣ್ಣಿಗೆ ಗುರಿಯಾಗಿದ್ದರು. ಬ್ರಿಟಿಷ್ ಅಧಿಕಾರಿಗಳು ಶರತ್‌ಚಂದ್ರನ ಚಟುವಟಿಕೆಗಳ ಮೇಲೆ ರಹಸ್ಯವಾಗಿ ಕಣ್ಣಿಟ್ಟಿದ್ದರು. ಯಾವುದೇ ರೀತಿಯ ಆಂದೋಳನಗಳನ್ನು ಹಮ್ಮಿಕೊಳ್ಳದಿರಲೆಂದು, ಯುವಕರ ಸಂಘಗಳನ್ನು ನಿರ್ಮಿಸದಿರಲೆಂದು ಆಗಾಗ್ಗೆ ನೌಕರಿಯಲ್ಲಿ ವರ್ಗಾವಣೆ ಮಾಡುತ್ತಿದ್ದರು.

**ಗುರುಭಕ್ತಿ:** ಅವರು ಎಲ್ಲಿದ್ದರೂ ಸದಾ ದಿವ್ಯತ್ರಯರ ಸ್ಮರಣೆಯಲ್ಲೇ ಕಾಲ ಕಳೆಯುತ್ತಿದ್ದು, ಭಕ್ತರ, ಯುವಕರ ಸಂಘಗಳನ್ನು, ಆಶ್ರಮವನ್ನು ಕಟ್ಟುತ್ತಿದ್ದರು. ಕಲ್ಕತ್ತದಿಂದ ದೂರವಿದ್ದರೂ ಬೇಲೂರು ಮಠದ ಸಾಧುಗಳೊಡನೆ ಸದಾ ಸಂಪರ್ಕದಲ್ಲಿರುತ್ತಿದ್ದನು.

ಕ್ರಿ.ಶ. ೧೯೧೦ರಲ್ಲಿ ಮೇದಿನಿಪುರದ ಅಂಚೆ ಕಚೇರಿಯಲ್ಲಿ ಪ್ರಧಾನ ಕಾರ್ಯನಿರ್ವಾಹಕರಾಗಿದ್ದಾಗ ಒಂದು ಪರಿಣಾಮಕಾರಿ ಘಟನೆ ನಡೆಯಿತು. ಜಮೀನುದಾರನ ಮನೆಯಲ್ಲಿ ಒಂದು ಅಧ್ಯಯನ ಕೇಂದ್ರ ಪ್ರಾರಂಭಿಸಿದ್ದನು. ಒಂದು ದಿನ ಕೆಲವು ನಾಸ್ತಿಕ ಯುವಕರು ಬಂದು ದುರಹಂಕಾರದಿಂದ ಶರತ್‌ಚಂದ್ರನಿಗೆ ಅವಮಾನ ಮಾಡಬೇಕೆಂದು ಸ್ವಾಮಿ ವಿವೇಕಾನಂದರ ಬಗ್ಗೆ ಕೀಳಾಗಿ ಮಾತನಾಡಿದರು. ಗುರುನಿಂದೆಯಿಂದ ಕೋಪಗೊಂಡು ಅವರೊಡನೆ ವಾಗ್ವಾದಕ್ಕೆ ತೊಡಗಿದರೂ ಏನು ಪ್ರಯೋಜನವಾಗಲಿಲ್ಲ. ಆ ಯುವಕರು ಕಿಂಚಿತ್ತೂ ವಿಚಲಿತರಾಗದೆ ಹೀಯಾಳಿಸಿ ಮಾತನಾಡುವುದನ್ನು ಮುಂದುವರೆಸಿದರು. ನೊಂದ ಶರತ್ ಎದ್ದು ಹೊರಡಲನುವಾದನು. 'ಅತಿಥಿದೇವೋ ಭವ' ಎನ್ನುವುದು ಹಿಂದೂಧರ್ಮ. ಮನೆಗೆ ಬಂದ ಗೌರವಾನ್ವಿತ ಅತಿಥಿಯೊಬ್ಬರು ಏನೂ ಸ್ವೀಕರಿಸಿದೆ ಹೊರಟುಹೋದರೆ ಆ ಮನೆಯವರಿಗೆ ಅಮಂಗಳವಾಗುವುದು ಎಂಬ ನಂಬಿಕೆ. ಆದ್ದರಿಂದ ಮನೆಯವರು, ಸ್ನೇಹಿತರು ಆತಿಥ್ಯ ಸ್ವೀಕರಿಸಬೇಕೆಂದು ಅನುನಯದಿಂದ ಪ್ರಾರ್ಥಿಸಿಕೊಂಡರು. ಆದರೆ ಶರತ್‌ಚಂದ್ರನ ನಿಶ್ಚಲ ಉತ್ತರ: ''ಯಾವ ಸ್ಥಳದಲ್ಲಿ ಗುರುನಿಂದನೆ ಯಾಗುವುದೋ ಅದು ಅಪವಿತ್ರ. ಮುಯ್ಯಿಗೆ ಮುಯ್ಯಿ ತೀರಿಸಲಾಗದಿದ್ದರೆ ಆ ಸ್ಥಳ ಬಿಟ್ಟು ಹೋಗಬೇಕೆಂದು ಶಾಸ್ತ್ರಗಳು ಹೇಳುತ್ತವೆ.'' ಮನೆಯವರ ಹಿತಕ್ಕಾಗಿ ತಮ್ಮ ನಿರ್ಧಾರವನ್ನು ಬದಲಿಸಬೇಕೆಂದು ಹಿರಿಯರು ವಿನಂತಿಸಿಕೊಂಡರು. ಆ ಸ್ಥಳವನ್ನು ಪವಿತ್ರಗೊಳಿಸಿದರೆ ತನ್ನ ನಿರ್ಧಾರವನ್ನು ಬದಲಿಸಲು ಒಪ್ಪಿದನು. ಶ್ರೀರಾಮಕೃಷ್ಣರ ಹಾಗೂ ಸ್ವಾಮಿ ವಿವೇಕಾನಂದರ ಭಾವಚಿತ್ರಗಳನ್ನು ಪ್ರತಿಷ್ಠಾಪಿಸಿ, ನಿತ್ಯಪೂಜೆಗೆ ಏರ್ಪಡಿಸಿದರೆ ಪವಿತ್ರವಾಗುವುದೆಂದು ಸೂಚಿಸಿದನು. ಸಂತೋಷದಿಂದ ಮನೆಯವರು ಕೂಡಲೇ ಕಾರ್ಯಗತಗೊಳಿಸಿಯೇ ಬಿಟ್ಟರು. ಶರತ್‌ಚಂದ್ರನು ಶಾಸ್ತ್ರೋಕ್ತವಾಗಿ ಭಾವಚಿತ್ರಗಳನ್ನು ಪ್ರತಿಷ್ಠಾಪಿಸಿ ಪ್ರಸಾದ ಸ್ವೀಕರಿಸಿದನು. ಈ ಸ್ಥಳ ಬೇಲೂರು ಮಠದ ಶಾಖಾ ಕೇಂದ್ರವಾಯಿತು. ಪ್ರಸ್ತುತ ಆ ಜಾಗದಲ್ಲಿ ಹೊಸ ಭವ್ಯಮಂದಿರ ನಿರ್ಮಾಣವಾಗಿದೆ.

ಗುರುವಿನ ಮಹಾಸಮಾಧಿಯ ನಂತರ ನಲ್ವತ್ತು ವರ್ಷಗಳ ಕಾಲ ಜೀವಿಸಿದ ಆತನ ಎಪ್ಪತ್ತೈದು ವರ್ಷಗಳ ತುಂಬು ಜೀವನದಲ್ಲಿ ಜ್ಞಾನ, ಭಕ್ತಿಗಳ ಸುಂದರ ಸಮ್ಮಿಶ್ರಣವನ್ನು ಕಾಣಬಹುದಿತ್ತು. ತನ್ನ ಜೀವನದಲ್ಲಿ ಎದುರಾದ ಅನೇಕ ಕಷ್ಟಸಂಕಟಗಳನ್ನು ಧೈರ್ಯವಾಗಿ ಎದುರಿಸಲು ಇವು ಸಹಕಾರಿಯಾದವು. ತನ್ನ ಆತ್ಮೀಯ ಗುರುವನ್ನು ಕಳೆದುಕೊಂಡ ದುಃಖವು 'ಸ್ವಾಮೀಜೀರ್ ಪ್ರತಿ' ಹಾಗೂ 'ಪೂರ್ವ ಸ್ಮೃತಿ' ಎಂಬ ಪದ್ಯಗಳ ರೂಪದಲ್ಲಿ ಹೊಮ್ಮಿದವು.

ಕ್ರಿ.ಶ. ೧೯೧೧–೧೨ರಲ್ಲಿ ಕೋಟಪಾರದ ಫರೀದ್‌ಪುರ ಜಿಲ್ಲೆಯ (ಈಗಿನ ಬಾಂಗ್ಲಾದೇಶ)ಯಲ್ಲಿದ್ದನು. ಹಿರಿಯ ಮಗಳು ಮಾರಣಾಂತಿಕ ಖಾಯಿಲೆಗೆ ತುತ್ತಾಗಿದ್ದಳು. ಬದುಕಿ ಉಳಿಯುವ ಭರವಸೆಯೇ ಇರಲಿಲ್ಲ. ಒಂದು ದಿನ ದಿವ್ಯತ್ರಯರ ವಿಚಾರಗಳನ್ನು ಕೇಳಲು ಕೆಲವು ಸಾಧುಬ್ರಹ್ಮಚಾರಿಗಳು ಬೇಲೂರು ಮಠದ ಶಾಖಾ ಕೇಂದ್ರವಾದ ಢಾಕಾ ಶ್ರೀರಾಮಕೃಷ್ಣ ಆಶ್ರಮದಿಂದ ಬಂದಿದ್ದರು. ಗುರುವಿನ ಬಗ್ಗೆ ಮಾತಾನಾಡುತ್ತಾ ಭಾವುಕನಾದ ಶರತ್‌ಚಂದ್ರನು ಬೇರೆ ಲೋಕದಲ್ಲಿದ್ದನು. ಇದ್ದಕಿದ್ದ ಹಾಗೆ ಮನೆಯೊಳಗಿನಿಂದ ಆರ್ತನಾದ, ಜೋರಾಗಿ ಅಳುವ ಧ್ವನಿ ಕೇಳಿ ಬಂದಿತು. ಕೆಲಸದಾಕೆಯು ಬಂದು, ''ಮಹಾಶಯರೆ, ನಿಮ್ಮ ಮಗಳು ತೀರಿಕೊಂಡಳು. ದಯವಿಟ್ಟು ಬನ್ನಿ'' ಎಂದಳು. ಬಂದ ಅತಿಥಿಗಳಿಗೆ ವಿಷಯ ಅರ್ಥವಾಗಲಿಲ್ಲ. ಶರತ್‌ಚಂದ್ರನು ಕಿಂಚಿತ್ತೂ ಧೃತಿಗೆಡದೆ, ಎದ್ದು ಆ ರೋದನದಿಂದ ಅತಿಥಿಗಳಿಗೆ ತೊಂದರೆಯಾಗದಿರಲೆಂದು ಕಿಟಕಿ, ಬಾಗಿಲುಗಳನ್ನು ಮುಚ್ಚಿದನು. ''ದೇಹ ಬರುತ್ತದೆ, ಹೋಗುತ್ತದೆ. ಆದರೆ ಇಂತಹ ಅಪ ರೂಪದ ದಿನ ಮತ್ತೆ ಬಾರದು! ಇವರೆಲ್ಲಾ ಶ್ರೀರಾಮಕೃಷ್ಣರ ಹಾಗೂ ಸ್ವಾಮೀಜಿಯವರ ಬಗ್ಗೆ ಕೇಳಲು ಉತ್ಸುಕರಾಗಿ ಬಂದಿದ್ದಾರೆ. ರೋದಿಸಲು ಅನೇಕ ಅವಕಾಶಗಳು ಸಿಗುತ್ತವೆ. ಆದರೆ ಸ್ವಾಮೀಜಿಯವರ ಕುರಿತು ಕೇಳಲು ಜನ ಬರುವುದು ಅಪರೂಪ. ಸ್ವಾಮೀಜಿ ನಿಜಕ್ಕೂ ಎಷ್ಟು ಕರುಣಾಳು! ಇಂತಹ ಶೋಕದ ಸಮಯದಲ್ಲಿ ತಮ್ಮ ಸ್ವಂತ ಜನರನ್ನು ಕಳುಹಿಸಿದ್ದಾರೆ'' ಎನ್ನುತ್ತಾ ತನ್ನ ಚಿಂತನೆಯನ್ನು ಮುಂದುವರಿಸಿದನು! ಗುರುವಿನ ಅಪಾರ ಕೃಪೆಯಿಂದ ಮಾಯೆಯ ಮೋಹಪಾಶವನ್ನು ಕಿತ್ತೊಗೆದಿದ್ದನು.

ಕ್ರಿ.ಶ. ೧೯೧೪ ರಿಂದ ೧೯೨೧ರ ವರೆಗೆ ಶ್ರೀರಾಮಕೃಷ್ಣರ ನೇರ ಶಿಷ್ಯರನೇಕರು ಶರತ್‌ನ ಆಪ್ಯಾಯಮಾನವಾದ ಆತಿಥ್ಯವನ್ನು ಅನುಭವಿಸಿದರು. ಗೋಲಾಪ್–ಮಾ, ಯೋಗಿನ್–ಮಾ, ಸ್ವಾಮಿ ಸುಬೋಧಾನಂದ, ಸ್ವಾಮಿ ಅದ್ಭುತಾನಂದ ಮತ್ತಿತರರು ಆಗಾಗ್ಗೆ ಶರತ್‌ನ ಮನೆಗೆ ಭೇಟಿನೀಡುತ್ತಿದ್ದರು. ಸ್ವಾಮಿ ಸುಬೋಧಾನಂದ, ಶಾರದಾನಂದ, ಗೌರಿ ಮಾ ಶರತ್‌ಚಂದ್ರನ ಮಕ್ಕಳನ್ನು ತೊಡೆಯ ಮೇಲೆ ಕೂರಿಸಿಕೊಂಡು ಪ್ರೀತಿ ಮಾಡುತ್ತಿದ್ದರು. ಕೆಲವೊಮ್ಮೆ ಕಥೆಗಳನ್ನು ಹೇಳುತ್ತಾ ಹೊರಗೆ ಅಡ್ಡಾಡಲು ಕರೆದೊಯ್ಯುತ್ತಿದ್ದರು.

*(ಮುಂದಿನ ಸಂಚಿಕೆಗೆ)*

# 'ನಿನ್ನ ಏಳಿಗೆಗೆ ನೀನೇ ಶಿಲ್ಪಿ'

**ಸ್ವಾಮಿ ಶಾಂತಿವ್ರತಾನಂದ**

ಒಂದು ಸತ್ಯಕಥೆಯನ್ನಾಧರಿಸಿ ಸ್ವಾಮೀಜಿಯವರ ವಿಚಾರವನ್ನು ಈ ಲೇಖನದಲ್ಲಿ ಮನದಟ್ಟು ಮಾಡಿಕೊಡಲಾಗಿದೆ. ಯುವಜನತೆ ಮೈಗೂಡಿಸಿಕೊಳ್ಳಬೇಕಾದ ಆತ್ಮಶ್ರದ್ಧೆ ಒಂದು ಅಸಾಧಾರಣ ಗುಣವೆಂಬುದು ಇಲ್ಲಿ ಬಿಂಬಿತವಾಗಿದೆ. ಲೇಖಕರು ಮೈಸೂರು ಶ್ರೀರಾಮಕೃಷ್ಣ ಆಶ್ರಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.



''ಸಂಪೂರ್ಣ ಜವಾಬ್ದಾರಿಯನ್ನು ನಿನ್ನ ಕೈಯ್ಯಲ್ಲಿ ತೆಗೆದುಕೋ. ಏಕೆಂದರೆ ನಿನ್ನ ಏಳಿಗೆಗೆ ನೀನೇ ಶಿಲ್ಪಿ. ನೀನು ಯಶಸ್ಸನ್ನು ಪಡೆಯಲು ಬೇಕಾದ ಶಕ್ತಿ ಮತ್ತು ನೆರವು ನಿನ್ನಲ್ಲೇ ಹುದುಗಿದೆ.''

— ಸ್ವಾಮಿ ವಿವೇಕಾನಂದ

ಸಮಾಜದಲ್ಲಿ ಪ್ರಸಿದ್ಧ ವ್ಯಕ್ತಿಗಳನ್ನು ನೋಡಿದಾಗ, ನಾವೂ ಅವರಂತೆಯೇ ಆಗಬೇಕು ಎಂದು ಆಶಿಸುತ್ತೇವೆ, ಬಯಸುತ್ತೇವೆ. ಸ್ವಲ್ಪಮಟ್ಟಿಗೆ ಪ್ರಯತ್ನವನ್ನೂ ಮಾಡುತ್ತೇವೆ. ಸವಾಲುಗಳು, ವಿಘ್ನಗಳು ಎದುರಾದಾಗ ಕೈಚೆಲ್ಲಿ ಕುಳಿತುಬಿಡುತ್ತೇವೆ. ಆದರೆ ಕೆಲವರು ಮಾತ್ರ ಅದನ್ನು ಮೆಟ್ಟಿ ನಿಲ್ಲುತ್ತಾರೆ, ಮುಂದೆ ಸಾಗುತ್ತಾರೆ. ಅಂತಹವರು ಮಾತ್ರ ತಮ್ಮ ಗುರಿಯನ್ನು ಸೇರಿ ಯಶಸ್ವಿ ವ್ಯಕ್ತಿಗಳಾಗುತ್ತಾರೆ. ಇನ್ನು ಉಳಿದ ಸಾಮಾನ್ಯ ಜನರು ನಮ್ಮ ಹಣೆಬರಹ, ವಿಧಿಯ ಲಿಖಿತ, ದೇವರ ಇಚ್ಛೆ ಎಂಬ ಕಾರಣಗಳನ್ನು ನೀಡಿ ಜೀವನದ ಪಯಣದಲ್ಲಿ ಸುಲಭವಾಗಿ ಸೋಲನ್ನು ಒಪ್ಪಿಕೊಂಡು ಬಿಡುತ್ತಾರೆ. ಜೀವನದ ಜೊತೆ ರಾಜಿಮಾಡಿಕೊಂಡು ಬಿಡುತ್ತಾರೆ. ಇನ್ನು ಕೆಲವರು 'ನಾನು ಅಂತಹವರ ಮನೆಯಲ್ಲಿ ಹುಟ್ಟಿದ್ದರೆ ಸಾಧಿಸಿಬಿಡುತ್ತಿದ್ದೆ; ಇಂತಹ ಅವಕಾಶಗಳು ನನಗೆ ದೊರೆತಿದ್ದರೆ ನಾನು ಜೀವನದಲ್ಲಿ ಮುಂದೆ ಸಾಗುತ್ತಿದ್ದೆ' — ಮುಂತಾದ ಆಲೋಚನೆಗಳು, ಮಾತುಗಳನ್ನು ಆಡುವುದನ್ನು ನಾವು ಕೇಳುತ್ತಿರುತ್ತೇವೆ. ಆದರೆ ಗುರಿಯನ್ನು ಸಾಧಿಸಿರುವ ವ್ಯಕ್ತಿಯನ್ನು ಗಮನಿಸಿದರೆ, ಅವನು ಅವಕಾಶಗಳಿಗೆ ಕಾಯುವುದಿಲ್ಲ, ಬದಲಾಗಿ ಅವಕಾಶಗಳನ್ನು ಸೃಷ್ಟಿಸಿಕೊಳ್ಳುತ್ತಾನೆ. ಅಲ್ಲದೆ ಸಿಕ್ಕ ಅವಕಾಶಗಳನ್ನು ಸಂಪೂರ್ಣವಾಗಿ, ಶಕ್ತಿಮೀರಿ ಉಪಯೋಗಿಸಿಕೊಳ್ಳುತ್ತಾನೆ ಎಂಬ ಸತ್ಯ ಗೋಚರವಾಗುತ್ತದೆ.

ಸಾಮಾನ್ಯ ಜನರು ಕಷ್ಟಗಳಿಗೆ ಹೆದರಿ, ಕೆಲಸಗಳನ್ನು ಪ್ರಾರಂಭಿಸುವುದಿಲ್ಲ. ಮಧ್ಯಮ ರೀತಿಯ ಜನರು ಕೆಲಸಗಳನ್ನು ಪ್ರಾರಂಭಿಸುತ್ತಾರೆ. ಕಷ್ಟಗಳು ಬಂದಾಗ, ಮಧ್ಯದಲ್ಲೇ ಬಿಟ್ಟುಬಿಡುತ್ತಾರೆ. ಉತ್ತಮ ಜನರು ಒಮ್ಮೆ ಕೆಲಸವನ್ನು ಪ್ರಾರಂಭಿಸಿದರೆ, ಎಷ್ಟೇ ಕಷ್ಟಗಳು, ಸವಾಲುಗಳು ಬಂದರೂ, ಹಿಡಿದ ಕೆಲಸವನ್ನು ಬಿಡದೆ ಸಾಧಿಸುತ್ತಾರೆ.

ಆದ್ದರಿಂದ ಜೀವನದಲ್ಲಿ ಏನನ್ನಾದರೂ ಸಾಧಿಸಬೇಕಾದರೆ, ನಮಗೆ ಛಲವಿರಬೇಕು. ಎದೆಗಾರಿಕೆ ಹಾಗೂ ಆತ್ಮವಿಶ್ವಾಸವಿರಬೇಕು. ಈ ಗುಣಗಳು ನಮ್ಮ ವ್ಯಕ್ತಿತ್ವದ ಅಂಗವೇ ಹೊರತು, ಹೊರಗೆ ಸಿಗುವಂತಹುದಲ್ಲ. ನಮ್ಮ ಆಲೋಚನೆ, ಸಂಸ್ಕಾರ, ಶ್ರಮವೇ ಕಾರಣ. ಆದ್ದರಿಂದಲೇ ಸ್ವಾಮಿ ವಿವೇಕಾನಂದರು, ನಿನ್ನ **'ಏಳಿಗೆಗೆ ನೀನೇ ಶಿಲ್ಪಿ'** ಎಂದರು.

ಇಂದಿನ ಯುವಕ-ಯುವತಿಯರಿಗೆ ಯಶಸ್ಸು ಎನ್ನುವುದು ಬಹುಬೇಗನೆ ಸುಲಭವಾಗಿ ಸಿಗಬೇಕು. ಹೆಚ್ಚು ಶ್ರಮ ಬೇಡ. ಸಾಮಾನ್ಯ ವ್ಯಕ್ತಿಗೂ, ಅಸಮಾನ್ಯ ವ್ಯಕ್ತಿಗೂ ಇರುವ ವ್ಯತ್ಯಾಸವೆಂದರೆ ಅಕಾರ ಮಾತ್ರ. ಇಲ್ಲಿ ಅಕರಾವೆಂದರೆ ಸಾಧಿಸುವ ಛಲ, ಹಠ. ಇದು ಒಬ್ಬ ವ್ಯಕ್ತಿಯಲ್ಲಿದ್ದರೆ ಅವನು ಅಥವಾ ಅವಳು ಏನನ್ನಾದರೂ ಸಾಧಿಸಬಹುದು.

ನಮ್ಮ ಕಥಾನಾಯಕಿ ಹುಟ್ಟು ಕುರುಡಿ. ಅವಳು ಬಾಲ್ಯದಲ್ಲಿ ತಂದೆ-ತಾಯಿಗಳನ್ನು ಕಳೆದುಕೊಂಡಳು. ಅವಳನ್ನು ನೋಡಿಕೊಳ್ಳು

ತ್ತಿದ್ದವರು ಎಂದರೆ ಅಜ್ಜಿ. ಅವರಿಗಾದರೂ ಮಾತನಾಡಲು ಬರುತ್ತಿರಲಿಲ್ಲ, ಕಿವಿ ಕೇಳಿಸುತ್ತಿರಲಿಲ್ಲ. ಚಿಕ್ಕ ವಯಸ್ಸಿನಲ್ಲೇ ಅಂಧ ಮಕ್ಕಳ ಶಾಲೆಯನ್ನು ಇವಳು ಸೇರಿಕೊಂಡಳು. ೧೫೦೦ ಮೀಟರ್ ಓಡುವ ಸ್ಪರ್ಧೆ. ಆ ಸ್ಪರ್ಧೆ ಅಂತರರಾಷ್ಟ್ರೀಯ ಮಟ್ಟದಲ್ಲಿ ನಡೆಯುತ್ತಿದ್ದುದರಿಂದ ಅದರಲ್ಲಿ ೪೩ ದೇಶಗಳಿಂದ ಸ್ಪರ್ಧಿಗಳು ಭಾಗವಹಿಸಿದ್ದರು. ಅವರ ನಡುವೆ ನಮ್ಮ ನಾಯಕಿ ಬಂಗಾರದ ಪದಕವನ್ನು ಪಡೆದುಕೊಂಡೇಬಿಟ್ಟಳು. ಅವಳು ಎಂತಹ ಹೋರಾಟಗಾರ್ತಿ ಇರಬಹುದು ಅಲ್ಲವೆ? 'ಛಲವೊಂದಿದ್ದರೆ ಸಾಧನೆಗಳು ನಮ್ಮ ಕಾಲುಬುಡದ ಬಳಿ' ಎಂಬಂತಿತ್ತು ಕುಮಾರಿ ರಕ್ಷಿತಾಳ ಸಾಧನೆ.

ಕು. ರಕ್ಷಿತಾ ರಾಜು ಇವಳ ಊರು ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಬಾಳೂರು ಸಮೀಪದ ಗುಡ್ನಳ್ಳಿ ಎಂಬ ಹಳ್ಳಿ. ಇವಳ ವಯಸ್ಸು ೧೭ ವರ್ಷ. ಸುಮಾರು ೮ ವರ್ಷಗಳ ಹಿಂದೆ ಚಿಕ್ಕಮಗಳೂರಿನಲ್ಲಿರುವ ಆಶಾಕಿರಣ ಅಂಧ ಮಕ್ಕಳ ಶಾಲೆಯನ್ನು ಸೇರಿದಳು. ಇವಳು ಸಾಮಾನ್ಯ ವಿದ್ಯಾರ್ಥಿನಿಯಂತೆ ತನ್ನ ವಿದ್ಯಾಭ್ಯಾಸವನ್ನು ಮಾಡುತ್ತಿದ್ದಳು. ಆಟದ ಮಾತು ಬಹಳ ದೂರ ಇವಳಿಗೆ. ಒಮ್ಮೆ ೨೦೧೪ರಲ್ಲಿ ತಾನು ಓದುತ್ತಿದ್ದ ಶಾಲೆಯಲ್ಲಿ ಶವಾದ್ ಎಂಬ ಹುಡುಗನ ಸಾಧನೆಯನ್ನು ಕೇಳುತ್ತಾಳೆ. ಅದರಿಂದ ಉತ್ತೇಜನಗೊಂಡ ರಕ್ಷಿತಾ ತಾನು ಒಬ್ಬ ಶ್ರೇಷ್ಠ ಆಟಗಾರ್ತಿ ಆಗಬೇಕು ಎಂಬ ಕನಸನ್ನು ಕಟ್ಟಿಕೊಂಡು, ದೃಢಸಂಕಲ್ಪವನ್ನು ಮಾಡುತ್ತಾಳೆ. ಆದರೆ ರಕ್ಷಿತಾ ಅಂದಿನಿಂದ ಬರಿ ಕನಸನ್ನು ಕಾಣುತ್ತಾ ಕೂರಲಿಲ್ಲ, ಬದಲಾಗಿ ಕಾರ್ಯಪ್ರವೃತ್ತಳಾದಳು. ಅಂದಿನಿಂದ ಪ್ರತಿನಿತ್ಯ ಓಡುವ ಅಭ್ಯಾಸವನ್ನು ಪ್ರಾರಂಭಿಸಿಯೇ ಬಿಟ್ಟಳು. ಶವಾದ್‌ನಂತೆ ತಾನು ಜಯಗಳಿಸಬೇಕೆಂದು ಸಂಕಲ್ಪಿಸಿದ್ದಳು. ಪ್ರತಿನಿತ್ಯ ಓಡುವ ಅಭ್ಯಾಸವನ್ನು ನಿರಂತರವಾಗಿ ಮಾಡಿದಳು. ಇವಳಿಗೆ ವಿಜಯಶ್ರೀ ಒಲಿಯಿತು. ಹಂತಹಂತವಾಗಿ, ವಿವಿಧ ಮಟ್ಟಗಳಲ್ಲಿ ವಿಜೇತಳಾದಳು. ೨೦೧೪ರಲ್ಲಿ ರಾಷ್ಟ್ರ ಮಟ್ಟದಲ್ಲಿ ರಕ್ಷಿತಾಳಿಗೆ ಅವಕಾಶ ದೊರೆಯಿತು. ಇವಳ ಉತ್ಸಾಹ, ಛಲವನ್ನು ಕಂಡು ಗೈಡ್ ರನ್ನರ್ ರಾಹುಲ್‌ರವರು ವಿಸ್ಮಿತರಾದರು. ರಕ್ಷಿತಾಳಿಗೆ ಹೆಚ್ಚಿನ ತರಬೇತಿಯನ್ನು ನೀಡಿದರೆ, ಇವಳು ರಾಷ್ಟ್ರ ಮಟ್ಟದಿಂದ ಅಂತರರಾಷ್ಟ್ರೀಯ ಮಟ್ಟಕ್ಕೆ ಹೋಗುತ್ತಾಳೆಂದು ಅರಿತರು. ರಾಹುಲ್‌ರವರು ಸ್ಪರ್ಧೆ ಮುಗಿದ ಮೇಲೆ ರಕ್ಷಿತಾಳನ್ನು ಬೆಂಗಳೂರಿಗೆ ಕರೆದುಕೊಂಡು ಬಂದರು. ಸಾಯಿ ಸ್ಪೋರ್ಟ್ಸ್ ಕ್ಲಬ್‌ನಲ್ಲಿ ಟ್ರೈನಿಂಗ್ ಪ್ರಾರಂಭಿಸಿದರು. ಗುರುಗಳ ಆದೇಶವನ್ನು ಚಾಚೂತಪ್ಪದೆ ರಕ್ಷಿತಾ ಪಾಲಿಸಿದಳು. ಪ್ರತಿನಿತ್ಯ ಅಭ್ಯಾಸವನ್ನು ಮಾಡಿದಳು. ನಾವು ಪ್ರಾಮಾಣಿಕವಾಗಿ ಸರಿಯಾಗಿ ಪ್ರಯತ್ನ ಮಾಡಿದರೆ, ಫಲ ಸಿಕ್ಕೇ ಸಿಗುತ್ತದೆ ಎಂಬಂತೆ ರಕ್ಷಿತಾಳಿಗೆ ಅಂತರ ರಾಷ್ಟ್ರೀಯ ಮಟ್ಟದಲ್ಲಿ ಪಾಲ್ಗೊಳ್ಳುವ ಅವಕಾಶ ಕೊಂಚ ಸಮಯದಲ್ಲಿ ದೊರೆಯಿತು.

ಏಷಿಯನ್ ಪ್ಯಾರಾ ಒಲಂಪಿಕ್ಸ್ ೨೦೧೮ರಲ್ಲಿ ಜಕಾರ್ತಾದಲ್ಲಿ ನಡೆಯಿತು. ಅಲ್ಲಿ ಅರ್ಹತಾ ಸುತ್ತಿನಲ್ಲಿ ರಕ್ಷಿತಾಳಿಗೆ ಅವಕಾಶ ದೊರೆಯಿತು. ಅವಕಾಶವನ್ನು ಸದುಪಯೋಗಪಡಿಸಿಕೊಂಡ ರಕ್ಷಿತಾ ಆಯ್ಕೆಯಾದಳು. ಪ್ಯಾರಾ ಒಲಂಪಿಕ್ಸ್‌ನ ಸ್ಪರ್ಧೆಗೆ ಹೋದಾಗ, ರಕ್ಷಿತಾಳಿಗೆ ಕೊಂಚ ಹೆದರಿಕೆ ಉಂಟಾಯಿತು. ಕಾರಣ, ಅಲ್ಲಿ ೪೩ ದೇಶದ ಉತ್ತಮ ಆಟಗಾರರು ಭಾಗವಹಿಸುತ್ತಿದ್ದಾರೆ ಎಂದು ತಿಳಿದು. ರಕ್ಷಿತಾಳು ತನ್ನ ಸ್ಪರ್ಧೆಯಿಂದ ಹಿಂದೆ ಸರಿಯುವುದಾಗಿ ತನ್ನ ಗುರುವಿನ ಬಳಿ ಹೇಳಿದಳು. ಗುರುವಾಗಿದ್ದ ರಾಹುಲ್‌ರವರು ರಕ್ಷಿತಾಳಿಗೆ ಧೈರ್ಯವನ್ನು, ಆತ್ಮವಿಶ್ವಾಸವನ್ನು ತುಂಬಿದರು. ''ಬೇರೆಯವರಿಗೆ ಸಾಧ್ಯವಾಗುವುದಾದರೆ ನಿನಗೇಕೆ ಸಾಧ್ಯವಿಲ್ಲ? ಎಲ್ಲಿ ಹೋಯಿತು ನಿನ್ನ ಛಲ, ನಿನ್ನ ಹಠ, ನಿನ್ನ ಜಿದ್ದು?'' ಎಂದು ಗುರುಗಳು ನೆನಪಿಸಿದರು. ಈಗ ಮತ್ತೊಮ್ಮೆ ರಕ್ಷಿತಾಳ ಸಾಹಸ ಪ್ರವೃತ್ತಿ, ಛಲವು ಉಕ್ಕಿಹರಿಯಿತು. ಪ್ರತಿಫಲವಾಗಿ ಅವಳು ಆತ್ಮವಿಶ್ವಾಸವನ್ನು ತಳೆದು ಆಟದಲ್ಲಿ ಭಾಗವಹಿಸಿದಳು. ಆಕೆ ಉತ್ತಮ ಪ್ರದರ್ಶನವನ್ನು ನೀಡಿದಳು. ಬಂಗಾರದ ಪದಕ ಅವಳನ್ನು ಹಿಂಬಾಲಿಸಿತು.

೧೫೦೦ ಮೀ ಓಟದ ಸ್ಪರ್ಧೆಯಲ್ಲಿ ರಕ್ಷಿತಾಳು ಪ್ರಥಮ ಸ್ಥಾನವನ್ನು ಗಳಿಸಿದಳು. 'ಗೋಲ್ಡನ್ ಗರ್ಲ್' – 'ಬಂಗಾರದ ರಾಣಿ' ಎಂಬ ಬಿರುದನ್ನು ಪಡೆದಳು. ಈಗ ೨೦೨೦ರಲ್ಲಿ ನಡೆಯುವ ಅಂಧರ ವಿಶ್ವಕಪ್‌ಗಾಗಿ ಈಕೆ ತಯಾರಿ ಮಾಡುತ್ತಿದ್ದಾಳೆ. ಇವಳ ಸಾಧನೆಗೆ ದೇಶದ ಪ್ರಧಾನಿ ಕೂಡ ಟ್ವೀಟ್ ಮೂಲಕ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. 'ನಿನ್ನ ಏಳಿಗೆಗೆ ನೀನೇ ಶಿಲ್ಪಿ' ಎಂಬ ಸ್ವಾಮಿ ವಿವೇಕಾನಂದರ ಮಾತನ್ನು ರಕ್ಷಿತಾ ಅಕ್ಷರಶಃ ಪಾಲಿಸಿದ್ದಾಳೆ.

ಅವಳು ಬಾಲ್ಯದಲ್ಲಿಯೇ ತನ್ನ ತಂದೆ-ತಾಯಯನ್ನು ಕಳೆದುಕೊಂಡಳು. ಹುಟ್ಟಿ ಕೆಲವೇ ವರ್ಷಗಳಲ್ಲೇ ತನ್ನ ಅಜ್ಜಿಯನ್ನೂ ಕಳೆದುಕೊಂಡಳು. ಹುಟ್ಟು ಕುರುಡಿ ಬೇರೆ. ಆದರೂ ವಿಶ್ವಮಟ್ಟದ ಸ್ಪಧೆರ್ಯಲ್ಲಿ ಭಾಗವಹಿಸಿ ಪ್ರಥಮ ಸ್ಥಾನವನ್ನು ಪಡೆಯಲು ಅವಳಿಗೆ ತನ್ನ ಛಲ, ಆಶಯ, ಕನಸ್ಸು, ನಿರಂತರ ಪರಿಶ್ರಮಗಳೇ ಕಾರಣ. ಅವಳು ತಾನು ಅಂಗವಿಕಲೆ ಎಂದು ಎಲ್ಲೂ ದುಃಖಿಸಲಿಲ್ಲ, ಪ್ರಾರಬ್ಧವನ್ನು, ದೇವರನ್ನು ಅಥವಾ ಹಿರಿಯರನ್ನು ಹಳಿಯಲಿಲ್ಲ. ಬದಲಾಗಿ, ತನಗೆ ಸಾಧ್ಯವಾದ ಮಟ್ಟಿಗೆ ಜೀವನದ ಸಂಗ್ರಾಮದಲ್ಲಿ ಹೋರಾಡಿದಳು, ಯಶಸ್ಸನ್ನು ಪಡೆದಳು. ನಮ್ಮ ಯುವಸಮೂಹಕ್ಕೆ ಇದು ಜೀವನದ ಪಾಠವಾಗಬೇಕು.

ಓ ಮಾನವ, ದೇವರ ಮಗು ನೀನು
ಅಮೃತ ಪುತ್ರನು ನೀನು,
ನಿನ್ನ ಉದ್ಧಾರ ನೀನೇ ಮಾಡಿಕೊ.
ಪರರು ನಿನ್ನನು ಉದ್ಧಾರ ಮಾಡುವರು
ಎಂಬ ಭ್ರಮೆ ಯಾಕೊ,
ಕೀಳರಿಮೆಯ ತೊರೆದು, ದೌರ್ಬಲ್ಯವನು ಸರಿಸಿ
ಧೀರವಂತನು ನಾನು ಎಂದು ಮುಂದೆ ಸಾಗು!
ಮುಂದೆ ಸಾಗು!

# ಯುವಜನತೆಗೆ ಸ್ವಾಮಿ ವಿವೇಕಾನಂದರ ಅತ್ಯುತ್ತಮ ಗ್ರಂಥಗಳು

"ನನ್ನ ಭರವಸೆಯೆಲ್ಲ ಈಗಿನ ಯುವಕರ ಮೇಲೆ ನಿಂತಿದೆ" ಎಂದಿದ್ದರು ಸ್ವಾಮಿ ವಿವೇಕಾನಂದರು. ಅವರ ಆಶಯದಂತೆ, ಭವಿಷ್ಯ ಭಾರತದ ಸುಭದ್ರ ನಿರ್ಮಾಣಕಾರ್ಯದಲ್ಲಿ ನಿರತರಾಗಬಲ್ಲ ಯುವಕರಿಗೆ ಉನ್ನತ ವಿಚಾರಗಳಿಂದಲೂ, ಶ್ರೇಷ್ಠ ಆದರ್ಶಗಳಿಂದಲೂ, ಸ್ಫೂರ್ತಿದಾಯಕ ಚಿಂತನೆಗಳಿಂದಲೂ ತುಂಬಿರುವ ಐದು ಉತ್ತಮ ಪುಸ್ತಕಗಳನ್ನಿಲ್ಲಿ ಸೂಚಿಸುತ್ತಿದ್ದೇವೆ. ಮೈಸೂರು ಶ್ರೀರಾಮಕೃಷ್ಣ ಆಶ್ರಮವು ಪ್ರಕಟಿಸಿರುವ ಈ ಪುಸ್ತಕಗಳು ಯುವಕರ ಸರ್ವತೋಮುಖ ಬೆಳವಣಿಗೆಗೆ ಸಹಕಾರಿಯಾಗಬಲ್ಲವು. ಈ ಪುಸ್ತಕಗಳು ಎಲ್ಲ ರಾಮಕೃಷ್ಣ ಆಶ್ರಮಗಳ ಪುಸ್ತಕ ಮಳಿಗೆಗಳಲ್ಲೂ, ಇತರ ಪುಸ್ತಕ ಭಂಡಾರಗಳಲ್ಲೂ ಲಭ್ಯ.

### ೧) 'ಎಚ್ಚೆತ್ತ ಭಾರತ'




ಆರು ಭಾಗಗಳಲ್ಲಿ ಸ್ವಾಮಿ ವಿವೇಕಾನಂದರ ಸ್ಫೂರ್ತಿದಾಯಕ ವಾಣಿಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ: ಯುವಕರಿಗೆ, ಸುಧಾರಕರಿಗೆ, ಶೈಕ್ಷಣಿಕ ತಜ್ಞರಿಗೆ, ಸ್ತ್ರೀಯರ ಉನ್ನತಿಗಾಗಿ, ಜನಸಾಮಾನ್ಯರ ಉನ್ನತಿಗಾಗಿ ಹಾಗೂ ದೇಶದ ವೈಭವದ ಮರುಸ್ಥಾಪನೆಗಾಗಿ ಸ್ವಾಮಿ ವಿವೇಕಾನಂದರ ಕರೆ — ಎಂಬ ವಿಷಯಗಳನ್ನು ಈ ಭಾಗಗಳಲ್ಲಿ ಕಾಣಬಹುದು. ಮೂಲ ಗ್ರಂಥವಾದ 'ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ'ಯ ಸಂಪುಟಗಳ ಉಲ್ಲೇಖಗಳನ್ನೂ ಇಲ್ಲಿ ನೀಡಲಾಗಿದೆ. *ಪುಟ: ೧೬೮, ಬೆಲೆ: ೫೦/-*

### ೨) 'ಯುವಕರಿಗೆ ಕರೆ'




ಸ್ವಾಮೀಜಿ ತಮ್ಮ ಪ್ರವಚನ, ಲೇಖನ ಹಾಗೂ ಪತ್ರಗಳ ಮೂಲಕ ಭಾರತದ ಯುವಕರಿಗೆ ನೀಡಿದ ಕರೆ ಅಂದಿಗೆ ಮಾತ್ರವಲ್ಲ, ಇಂದಿಗೂ ಪ್ರಸ್ತುತ. ಅಂಥ ಪ್ರೇರಣದಾಯಕ ನುಡಿಗಳ ಸಂಕಲನವಿದು. ೧೯ ಭಾಗಗಳಲ್ಲಿ ವಿವಿಧ ವಿಷಯಗಳಿಗೆ ಅನುಗುಣವಾಗಿ ಈ ಉಪದೇಶಗಳನ್ನು ಉಲ್ಲೇಖ ಸಮೇತ ನೀಡಲಾಗಿದೆ. *ಪುಟ: ೧೦೪, ಬೆಲೆ: ೧೫/-*

### ೩.' ಕೊಲಂಬೊ ಇಂದ ಆಲ್ಮೋರಕೆ'




ಪಾಶ್ಚಾತ್ಯ ದೇಶಗಳಲ್ಲಿ ಜಯಭೇರಿ ಬಾರಿಸಿ ತಾಯ್ನಾಡಿಗೆ ಮರಳಿದ ಸ್ವಾಮೀಜಿ ಭಾರತ ದುದ್ದಕ್ಕೂ ಸಂಚರಿಸಿ, ತಮಗೆ ನೀಡಿದ ಅಭೂತಪೂರ್ವ ಸ್ವಾಗತಕ್ಕೆ ಪ್ರತಿಕ್ರಿಯೆ ನೀಡುತ್ತ ಮಾಡಿದ ಅತ್ಯಂತ ಉತ್ಸಾಹಭರಿತ ಪ್ರವಚನಗಳ ಸಂಕಲನವಿದು. ಭಾರತದ ಹಿರಿಮೆ, ಇಲ್ಲಿನ ಸಂಸ್ಕೃತಿ, ಇತಿಹಾಸ, ಧರ್ಮ, ಆಧ್ಯಾತ್ಮಿಕತೆ, ಸಮಾಜ, ಭವಿಷ್ಯ ಭಾರತದ ನಿರ್ಮಾಣ ಮುಂತಾದ ವಿಷಯಗಳನ್ನು ಕುರಿತಂತೆ ಸ್ವಾಮೀಜಿಯವರ ಶ್ರೇಷ್ಠ ಹಾಗೂ ಉದಾತ್ತ ಚಿಂತನೆಗಳು ಇಲ್ಲಿವೆ. ಸ್ವಾತಂತ್ರ್ಯ ಪೂರ್ವದಲ್ಲಿ ಮಲಗಿದ್ದ ಭಾರತವನ್ನು ಬಡಿದೆಬ್ಬಿಸಲು ಸ್ವಾಮೀಜಿ ನೀಡಿದ ಕರೆ ಅವರ ಅಪ್ರತಿಮ ದೇಶಪ್ರೇಮವನ್ನೂ, ಮಾನವ ಪ್ರೇಮವನ್ನೂ ಪ್ರಕಟಪಡಿಸುತ್ತದೆ. ಪ್ರತಿಯೊಬ್ಬ ಭಾರತೀಯನೂ ಓದಲೇಬೇಕಾದ ಗ್ರಂಥವಿದು. *ಪುಟ: ೪೩೨, ಬೆಲೆ: ೮೦/-*

### ೪. ವ್ಯಕ್ತಿತ್ವ ನಿರ್ಮಾಣ




ಸ್ವಾಮೀಜಿ ತಮ್ಮ ಬೋಧನೆಗಳ ಮೂಲಕ ಭವಿಷ್ಯ ಭಾರತದ ನಿರ್ಮಾಣಕ್ಕಾಗಿ ನಮ್ಮ ದೇಶದ ಯುವಕರ ವ್ಯಕ್ತಿತ್ವವನ್ನು ಬಲಶಾಲಿಯನ್ನಾಗಿಯೂ, ಶೀಲ-ಚಾರಿತ್ರ್ಯ ಸಂಪನ್ನರನ್ನಾಗಿಯೂ, ಆತ್ಮವಿಶ್ವಾಸದಿಂದ ಕೂಡಿದವರನ್ನಾಗಿಯೂ ರೂಪಿಸಲು ಬಯಸಿದ್ದರು. ಅವರ ಕೃತಿಸಂಗ್ರಹದಲ್ಲಿ ವಿವಿಧ ಭಾಗಗಳಲ್ಲಿ ಹರಡಿರುವ ಉಪದೇಶಗಳನ್ನು ಓದುಗರಿಗೆ ಅನುಕೂಲವಾಗುವಂತೆ ಕ್ರಮಬದ್ಧವಾಗಿ ಇಲ್ಲಿ ಜೋಡಿಸಿ ನೀಡಲಾಗಿದೆ. ವಿದ್ಯಾರ್ಥಿಗಳು, ಯುವಕರು ಈ ಪುಸ್ತಕದಿಂದ ವಿಶೇಷ ಪ್ರಯೋಜನ ಹೊಂದಿದ್ದಾರೆ. *ಪುಟ: ೯೬, ಬೆಲೆ: ೧೫*

### ೫. 'ಎಚ್ಚೆತ್ತ ಚೇತನ'




'ಸ್ವಾಮಿ ವಿವೇಕಾನಂದರ ಜೀವನದ ರೋಮಾಂಚಕ ಘಟನೆಗಳು ಮತ್ತು ಉದ್ಧಾರಕ ನುಡಿಗಳು' ಇಲ್ಲಿ ಸಂಕಲಿತವಾಗಿವೆ. ಈ ಕೃತಿಯ ಲಕ್ಷಾಂತರ ಪ್ರತಿಗಳು ನಾಡಿನ ಯುವಕ, ಯುವತಿಯರ ಕೈ ಸೇರಿವೆ. ಅತ್ಯಂತ ಆಕರ್ಷಕವಾದ ಈ ಪುಸ್ತಕ ಸ್ವಾಮೀಜಿ ಕುರಿತ ನಮ್ಮ ಭಕ್ತಿ-ಗೌರವಗಳನ್ನು ಇಮ್ಮಡಿಗೊಳಿಸುವಂತಿದೆ. *ಪುಟ: ೮೦, ಬೆಲೆ: ೧೫/-*

# ಸಾವಿನಾಚೆಗೆ, ಚೈತನ್ಯದ ಬೆಳಕಿಗೆ

ಸ್ವಾಮಿ ವೀರೇಶಾನಂದ

(ಹಿಂದಿನ ಸಂಚಿಕೆಯಿಂದ ಮುಂದುವರಿದಿದೆ)

### ದೃಶ್ಯ ೩

*(ಯಮನು ಆಸನದಲ್ಲಿ ಕುಳಿತುಕೊಂಡಿದ್ದಾನೆ. ಅವನ ಮುಂದೆ ಮಂಡಿಯೂರಿ ನಚಿಕೇತನು ಕುಳಿತುಕೊಂಡಿದ್ದಾನೆ. ಹಿಂದೆ ಪರದೆಯಲ್ಲಿ ಓಂಕಾರವು ಕಾಣಬರುತ್ತಿದೆ.)*

**ಯಮ :** ಮಗು, ವಿದ್ಯೆ, ಅವಿದ್ಯೆ – ಇವೆರಡರ ನಡುವಿನ ವ್ಯತ್ಯಾಸವನ್ನು ನೀನು ತಿಳಿದುಕೊಳ್ಳಬೇಕಪ್ಪಾ. ಇವೆರಡೂ ವಿರುದ್ಧವಾದುವು. ದೂರ ದೂರವಾಗಿ ಇರುವಂಥವು. ಮಗೂ, ನಚಿಕೇತ, ನೀನು ಅವಿದ್ಯೆಯನ್ನು ತಿರಸ್ಕರಿಸಿದ್ದೀಯೆ. ಯಾವ ಕಾಮನೆಗಳೂ ನಿನ್ನನ್ನು ಆಕರ್ಷಿಸಲಿಲ್ಲ. ಮಗೂ, ನೀನು ನಿಜವಾಗಿಯೂ ವಿದ್ಯೆಯಲ್ಲಿ ಮಾತ್ರವೇ ಆಸಕ್ತಿಯುಳ್ಳವನು.

ಅವಿದ್ಯೆಯಲ್ಲಿ ಇರುವ ಜನರು ತಾವೇ ಧೀರರು, ಪಂಡಿತರು ಎಂದುಕೊಳ್ಳುತ್ತಾರೆ. ಬೇರೆಯವರನ್ನು ಉದ್ಧಾರಮಾಡಲು ಹೋಗುತ್ತಾರೆ. ಒಬ್ಬ ಕುರುಡ ಇನ್ನೊಬ್ಬ ಕುರುಡನಿಗೆ ಮಾರ್ಗದರ್ಶನ ಮಾಡುವಂತೆ ಇದ್ದಾರೆ ಅವರು. ಏಕೆಂದರೆ ಅವರೇ ಮೂಢರಂತೆ ತೊಳಲುತ್ತಿದ್ದಾರೆ. ಅವರು ಬಾಲಕರಂತೆ ಇರುತ್ತಾರೆ. ಹಣದ ಮೋಹದಿಂದ ಮೂಢರಾಗಿರುತ್ತಾರೆ. ಅಂಥವರಿಗೆ ಪರಲೋಕದ ಜ್ಞಾನವು ಲಭಿಸುವುದಿಲ್ಲ. ಇರುವುದು ಇದೇ ಲೋಕ, ಪರಲೋಕವೇ ಇಲ್ಲ ಎಂದು ಅವರು ತಪ್ಪಾಗಿ ತಿಳಿದುಕೊಂಡಿರುತ್ತಾರೆ. ಈ ಅಜ್ಞಾನದ ವಶಕ್ಕೆ ಒಳಗಾಗಿ ಮತ್ತೆ ಮತ್ತೆ ಸಾವಿನ ದೇವತೆಯಾದ ನನ್ನ ವಶಕ್ಕೆ ಬಂದು ಬೀಳುತ್ತಾರೆ.

**ನಚಿಕೇತ:** ಹೀಗೇನು? ಅವರಿಗೆ ಎಂದೂ ಆತ್ಮವಿದ್ಯೆಯು ದೊರಕುವುದೇ ಇಲ್ಲವೇನು?

**ಯಮ:** ಮಗೂ, ಈ ಆತ್ಮವಿದ್ಯೆಯನ್ನು ಹೇಳುವುದಕ್ಕೂ, ಕೇಳುವುದಕ್ಕೂ ಅರ್ಹತೆ ಇರಬೇಕು. ಬಹಳ ಜನರಿಗೆ ಇದು ಕೇಳುವುದಕ್ಕೂ ಸಿಕ್ಕುವುದಿಲ್ಲ. ಸಿಕ್ಕರೂ ಅದು ಅರ್ಥವಾಗುವುದಿಲ್ಲ. ಹೀಗೆ ಹೇಳುವವನೂ ಆಶ್ಚರ್ಯವೇ; ಕೇಳುವವನೂ ಆಶ್ಚರ್ಯವೇ. ಮಗೂ, ಅರ್ಹತೆಯಿಲ್ಲದವನು ಆತ್ಮವಿದ್ಯೆಯನ್ನು ಹೇಳಿದರೆ, ಇದು ಅರ್ಥವಾಗದು. ತನ್ನಾತ್ಮರೂಪವು ಬ್ರಹ್ಮರೂಪಕ್ಕಿಂತ ಬೇರೆಯಲ್ಲ ಎಂಬ ಅಭೇದವನ್ನು ಯಾರು ಅನುಭವಕ್ಕೆ ತಂದುಕೊಂಡಿದ್ದಾರೆಯೋ, ಆಗ ಮಾತ್ರ ಅರ್ಥವಾಗುವುದು. ಏಕೆಂದರೆ, ಆತ್ಮತತ್ತ್ವವು ಅಣುವುಗಿಂತಲೂ ಅಣುವಾದದ್ದು. ಇದು ತರ್ಕಕ್ಕೆ ನಿಲ್ಲುವಂಥದ್ದಲ್ಲ. ಯಾರು ಇದನ್ನು ಸಾಕ್ಷಾತ್ಕಾರ ಮಾಡಿಕೊಂಡಿದ್ದಾರೆಯೋ, ಅವರು ಹೇಳಿದರೆ ಮಾತ್ರವೇ ಅರ್ಥವಾಗುವುದು. ಮಗೂ, ನೀನೊಬ್ಬ ಒಳ್ಳೆಯ ವಿದ್ಯಾರ್ಥಿ. ಈ ಆತ್ಮತತ್ತ್ವವನ್ನು ಅರಿತುಕೊಳ್ಳುವ ಸಾಮರ್ಥ್ಯ ನಿನ್ನಲ್ಲಿದೆ. ಏಕೆಂದರೆ, ನೀನು ಸತ್ಯನಿಷ್ಠನಾಗಿದ್ದೀಯೆ. ಮಗೂ, ಎಲ್ಲ ಬಗೆಯ ಕರ್ಮಫಲಗಳೂ ಅನಿತ್ಯವಾದುವು. ಒಂದು ನಿಯಮವನ್ನು ಹೇಳಿಕೊಡುತ್ತೇನೆ. ಇದನ್ನು ಜ್ಞಾಪಕದಲ್ಲಿ ಇಟ್ಟುಕೋ: ಅನಿತ್ಯವಾದ ಪದಾರ್ಥಗಳಿಂದ ನಿತ್ಯವಾದ ವಸ್ತುವನ್ನು ಎಂದಿಗೂ ಪಡೆದುಕೊಳ್ಳಲಾಗುವುದಿಲ್ಲ. ಮಗೂ, ಜಗತ್ತಿನ ಎಲ್ಲ ಸುಖಗಳನ್ನು ನೀನು ತ್ಯಜಿಸಿದ್ದೀಯೆ; ಹಾಗೆಯೇ ಪರಲೋಕದ ಲೋಕಗಳನ್ನೂ ತ್ಯಾಗಮಾಡಿದ್ದೀಯೆ. ದೊಡ್ಡ ದೊಡ್ಡ ಅಂತಸ್ತು, ಪ್ರತಿಷ್ಠೆ – ಎಲ್ಲವನ್ನೂ ಧೀರನಾಗಿ ಬಿಟ್ಟುಬಿಟ್ಟಿದ್ದೀಯೆ. ಪರತತ್ತ್ವನ್ನೇ ಬಯಸಿ, ಈ ಸಂಸಾರಭೋಗವನ್ನು ನೀನು ತ್ಯಜಿಸಿದ್ದೀಯೆ. ಆಹಾ, ಮಗೂ! ನೀನು ನಿಜವಾಗಿಯೂ ಶ್ರೇಷ್ಠವಾದ ಗುಣವನ್ನು ಉಳ್ಳವನು.

**ನಚಿಕೇತ:** ಯಮರಾಜ, ಈ ಆತ್ಮವೆಂಬುದು ಹೇಗೆ ಇರುತ್ತದೆ? ದಯವಿಟ್ಟು ಹೇಳುತ್ತೀಯಾ?

**ಯಮರಾಜ :** ಮಗೂ, ನಚಿಕೇತ. ಈ ಆತ್ಮವನ್ನು ತಿಳಿದುಕೊಳ್ಳುವುದು ಬಹಳ ಕಷ್ಟ. ಅವನು ಹೃದಯಗುಹೆಯಲ್ಲಿಯೇ ಇರುತ್ತಾನೆ. ಅವನನ್ನು ಯೋಗಮಾರ್ಗದಿಂದ ಸಾಕ್ಷಾತ್ಕಾರ ಮಾಡಿಕೊಳ್ಳಬಹುದು. ಹಾಗೆ ತಿಳಿದುಕೊಂಡ ಧೀರನಿಗೆ ಯಾವ ಹರ್ಷವೂ, ಯಾವ ಶೋಕವೂ ಉಂಟಾಗುವುದಿಲ್ಲ. ಮರ್ತ್ಯನಾದ ಮನುಷ್ಯನು ಇದನ್ನು ತಿಳಿದುಕೊಂಡರೆ, ಅತ್ಯಂತ ಸುಖವನ್ನು ಹೊಂದುತ್ತಾನೆ. ಆ ಸುಖದ ಮುಂದೆ ಎಲ್ಲ ಸುಖಗಳೂ ಅಲ್ಪವೇ ಆಗಿವೆ. ನಚಿಕೇತ, ಈ ಸುಖವನ್ನು ಪಡೆದುಕೊಳ್ಳುವ ಹಂತದಲ್ಲಿ ನೀನಿದ್ದೀಯೆ ಎಂದು ನನಗೆ ಅನ್ನಿಸುತ್ತದೆ. ನಿನಗೆ ಅಭಿನಂದನೆಗಳು.

**ನಚಿಕೇತ:** ಒಳಿತು–ಕೆಡಕು, ಧರ್ಮ–ಅಧರ್ಮ, ಕಾರ್ಯ–ಕಾರಣ, ಆಗಿ ಹೋಗಿರುವುದು–ಮುಂದೆ ಆಗುವಂಥದ್ದು – ಇವೆಲ್ಲವನ್ನೂ ಆತ್ಮತತ್ತ್ವವು ಮೀರಿರುವಂಥದ್ದು ಎಂದು ನಾನು ಕೇಳಿತಿಳಿದಿದ್ದೇನೆ. ಅದನ್ನು ನೀನು ಕಂಡಿರುವೆ. ಅದರ ಬಗ್ಗೆ ದಯವಿಟ್ಟು ನನಗೆ ಹೇಳಿಕೊಡು.

**ಯಮ:** ಮಗೂ, ಎಲ್ಲ ವೇದಗಳೂ ಈ ಆತ್ಮತತ್ತ್ವದ ಬಗ್ಗೆಯೇ ಹೇಳುತ್ತವೆ; ಎಲ್ಲ ತಪಸ್ಸುಗಳಿಗೂ ಇದೇ ಗುರಿ. ಇದನ್ನು ಬಯಸಿಯೇ ಸಾಧಕರು ಬ್ರಹ್ಮಚರ್ಯವ್ರತವನ್ನು ಕೈಗೊಳ್ಳುತ್ತಾರೆ. ಅಂಥ ಬ್ರಹ್ಮಗತಿಯನ್ನು ಓಂಕಾರದ ಮೂಲಕ ತಿಳಿದವರು ಸೂಚಿಸುತ್ತಾರೆ. ಈ ಓಂಕಾರವೇ ಬ್ರಹ್ಮ. ಈ ಅಕ್ಷರವೇ ಶ್ರೇಷ್ಠವಾದುದು. ಬ್ರಹ್ಮವನ್ನು ಧ್ಯಾನಮಾಡಬೇಕಾದರೆ, ನಾವು ಅವಲಂಬಿಸಬೇಕಾದ ಅತ್ಯಂತ ಶ್ರೇಷ್ಠ ಆಲಂಬನವಿದು. ಇಂಥ ಓಂಕಾರದಿಂದ ಸೂಚಿತವಾದ ಆತ್ಮಕ್ಕೆ ಹುಟ್ಟಿಲ್ಲ, ಮರಣವಿಲ್ಲ, ಯಾವ ಮಾರ್ಪಾಡೂ ಇಲ್ಲ. ಅದು ಯಾವತ್ತೂ ಹುಟ್ಟಿಲ್ಲ. ಇದು ಶಾಶ್ವತವಾದುದು. ಶರೀರವು ನಾಶವಾದರೂ ಇದು ನಾಶವಾಗುವುದಿಲ್ಲ. ಆತ್ಮವು ಕೊಲ್ಲುತ್ತದೆ, ಕೊಲ್ಲಲ್ಪಡುತ್ತಾನೆ ಎಂದು ತಿಳಿಯುವುದು ಅಜ್ಞಾನ. ಆತ್ಮವು ಕೊಲ್ಲುವುದೂ ಇಲ್ಲ, ಕೊಲ್ಲಲ್ಪಡುವುದಿಲ್ಲ. ಆತ್ಮವು ಅಣುವಿಗಿಂತ ಅಣುವಾಗಿರುವುದು; ಮಹತ್ತಿಗಿಂದ ಮಹತ್ತಾಗಿರುವುದು. ಪ್ರತಿಯೊಬ್ಬರ ಹೃದಯಗುಹೆಯಲ್ಲಿ ಇರುವುದು. ಇದನ್ನು ತಿಳಿದವನು ಎಲ್ಲ ಶೋಕಗಳನ್ನೂ ಪರಿಹರಿಸಿಕೊಳ್ಳುತ್ತಾನೆ. ದೇಹ–ಇಂದ್ರಿಯಗಳೆಲ್ಲ ಪ್ರಸನ್ನವಾಗಿ ಅವೇ ಆತ್ಮನ ಮಹಿಮೆಯನ್ನು ಕಂಡುಕೊಳ್ಳುವುದಕ್ಕೆ ಅವನಿಗೆ ಸಹಾಯ ಮಾಡುತ್ತವೆ. ಸಾಮಾನ್ಯ

ಜನರಿಗೆ ಇದು ತಿಳಿಯುವುದಿಲ್ಲ. ಕೇವಲ ಜ್ಞಾನಿಯು ಮಾತ್ರ ಇದನ್ನು ಅರಿಯಬಲ್ಲ.

**ನಚಿಕೇತ:** ಆತ್ಮವನ್ನು ತಿಳಿದುಕೊಳ್ಳುವುದು ಬಹಳ ಕಷ್ಟ ಎಂದು ಹೇಳಿದಿರಿ. ಹಾಗಾದರೆ ಅದನ್ನು ಸಾಕ್ಷಾತ್ಕರಿಸುವ ವಿಧಾನವಾದರೂ ಏನು?

**ಯಮ:** ಬರಿಯ ಅಧ್ಯಯನದಿಂದ, ಮೇಧಾವಿತನ ಅಥವಾ ಪ್ರವಚನದಿಂದ ಆತ್ಮನನ್ನು ಪಡೆಯಲಾಗದು. ಯಾರು ಇದನ್ನು ಉತ್ಕಟವಾಗಿ ಬಯಸುತ್ತಾರೊ, ಅವನಿಗೆ ಆ ಆತ್ಮವೇ ತನ್ನ ನಿಜವಾದ ತತ್ತ್ವವನ್ನು ತೆರೆದು ತೋರಿಸುವನು. ಮಗೂ, ಆತ್ಮವು ಎಲ್ಲಕ್ಕಿಂತ ಸೂಕ್ಷ್ಮವಾದುದು ಮತ್ತು ಹೆಚ್ಚಿನದು. ಇದನ್ನು ಹೀಗೆ ವಿವರಿಸಬಹುದು: ಇಂದ್ರಿಯಗಳಿಗಿಂತ ಶಬ್ದ, ಸ್ಪರ್ಶ ಮುಂತಾದ ವಿಷಯ ವಸ್ತುಗಳಿಗಿಂತ ಹೆಚ್ಚಿನದು. ವಿಷಯ ವಸ್ತುಗಳಿಗಿಂತ ಮನಸ್ಸು ಸೂಕ್ಷ್ಮವಾದುದು ಮತ್ತು ಹೆಚ್ಚಿನದು. ಮನಸ್ಸಿಗಿಂತ ಬುದ್ಧಿ ಸೂಕ್ಷವಾದುದು ಮತ್ತು ಹೆಚ್ಚಿನದು. ಬುದ್ಧಿಗಿಂತ ಸೂಕ್ಷ್ಮವಾದುದು ಮತ್ತು ಹೆಚ್ಚಿನದು ಆತ್ಮ. ಇದಕ್ಕಿಂತ ಹೆಚ್ಚಿನದು ಬೇರೆ ಯಾವುದೂ ಇಲ್ಲ.

**ನಚಿಕೇತ :** ಯಮರಾಜ, ಈ ದೇಹಕ್ಕೂ ಆತ್ಮನಿಗೂ ಇರುವ ಸಂಬಂಧವಾದರೂ ಏನು?

**ಯಮ:** ಇದನ್ನು ಒಂದು ರೂಪಕದ ಮೂಲಕ ನಾನು ನಿನಗೆ ತಿಳಿಸಿಕೊಡಲು ಪ್ರಯತ್ನಿಸುತ್ತೇನೆ. ನೋಡು, ಈ ಶರೀರವೇ ಒಂದು ರಥದ ಹಾಗೆ ಇದೆ ಎಂದುಕೋ. ಈ ರಥವನ್ನು ಏರಿ ಹೊರಟಿರುವ ಯಜಮಾನ ಯಾರು ಎಂದುಕೊಂಡೆ? ಅದೇ ಆತ್ಮ. ಸಾರಥಿಯಾಗಿರುವವನು ನಮ್ಮ ಬುದ್ಧಿ. ಸಾರಥಿ ಕುದುರೆಗಳನ್ನು ನಿಯಂತ್ರಿಸಲು ಉಪಯೋಗಿಸುವ ಹಗ್ಗವೇ ಮನಸ್ಸು. ಕುದುರೆಗಳೇ ಅತ್ತಿತ್ತ ವಿಷಯಗಳ ಹತ್ತಿರ ಹೋಗುವಂಥ ಇಂದ್ರಿಯಗಳು. ಇಂದ್ರಿಯಗಳು ಸಾಗುವ ಶಬ್ದ, ಸ್ಪರ್ಶ ಮುಂತಾದ ವಿಷಯಗಳೇ ರಸ್ತೆ. ಇಂದ್ರಿಯ, ಮನಸ್ಸು, ಆತ್ಮ - ಇವುಗಳೆಲ್ಲವೂ ಕೂಡಿಕೊಂಡಾಗ ಅದನ್ನೇ 'ಭೋಕ್ತಾ' ಎಂದು ಕರೆಯುತ್ತಾರೆ. ಇದನ್ನು ಬಿಟ್ಟು, ಭೋಕ್ತ, ಕರ್ತೃ ಮುಂತಾದ ಭಾವನೆಗಳು ಆತ್ಮನಿಗೆ ತಟ್ಟುವುದೇ ಇಲ್ಲ. ಈ ಆತ್ಮವು ಎಲ್ಲ ಜೀವರಾಶಿಗಳಲ್ಲಿಯೂ ಗೂಢವಾಗಿ ಇದ್ದುಕೊಂಡಿದೆ. ಇದನ್ನು ಕಾಣಲು ಆಗುವುದಿಲ್ಲ. ಇದು ಸೂಕ್ಷ್ಮದರ್ಶಿಗಳ ಸೂಕ್ಷ್ಮವಾದ ಬುದ್ಧಿಗೆ ಮಾತ್ರ ಕಾಣಿಸುತ್ತದೆ.

**ನಚಿಕೇತ :** ಯಮರಾಜ, ಈ ಆತ್ಮವು ಸಾಧಾರಣರ ಕಣ್ಣಿಗೆ ಕಾಣುವುದಿಲ್ಲವೇಕೆ?

**ಯಮರಾಜ :** ಮಗೂ, ಯಾವುದಕ್ಕೆ ಗುಣಗಳು ಇವೆಯೋ, ಅಂಥ ವಸ್ತುವು ಮಾತ್ರವೇ ಕಣ್ಣಿಗೆ ಕಾಣಿಸಿಕೊಳ್ಳುತ್ತದೆ. ಈ ಆತ್ಮವಸ್ತುವಿಗೆ ಯಾವುದೇ ಲೌಕಿಕ ಗುಣಗಳೂ ಇಲ್ಲ. ಇದಕ್ಕೆ ಶಬ್ದವಿಲ್ಲ, ಸ್ಪರ್ಶವಿಲ್ಲ, ರೂಪವಿಲ್ಲ. ಇದು ಅವ್ಯಯವಾದುದು. ಇದಕ್ಕೆ ರಸವಿಲ್ಲ, ಗಂಧವಿಲ್ಲ. ಇದು ಅನಾದಿಯಾದುದು, ಅನಂತವಾದುದು. ಸಮಷ್ಟಿ ರೂಪದ ಮಹತ್ತಿಗಿಂತಲೂ ಹೆಚ್ಚಿನದು. ಇದು ನಿರಂತರವಾಗಿ ಸ್ಥಾಯಿಯಾದುದು. ಇಂಥ ಆತ್ಮವನ್ನು ತಿಳಿದುಕೊಂಡರೆ, ಒಬ್ಬನು ಜನನಮರಣಗಳ ಸಂಕೋಲೆಯಿಂದ ಪಾರಾಗುವನು.

**ನಚಿಕೇತ:** ಯಮರಾಜ, ಈ ಆತ್ಮಜ್ಞಾನಕ್ಕೆ ಅಡ್ಡಿಯಾಗುವುದು ಯಾವುದು?

**ಯಮರಾಜ :** ಮಗೂ, ಈಶ್ವರನು ಈ ಇಂದ್ರಿಯಗಳನ್ನು ಹೇಗೆ ಸೃಷ್ಟಿಸಿದ್ದಾನೆ, ಗೊತ್ತೆ? ಅವೆಲ್ಲವೂ ಹೊರಮುಖವಾದುದು. ಆದ್ದರಿಂದಲೇ ಮನುಷ್ಯರು ಹೊರಗಿನ ಜಗತ್ತಿನ ಅನುಭವವನ್ನು ಪಡೆದುಕೊಳ್ಳುವುದರಲ್ಲಿಯೇ ಮಗ್ನರಾಗುತ್ತಾರೆ. ಅವರು ತಮ್ಮ ದೇಹ, ಮನಸ್ಸು, ಬುದ್ಧಿಗಳ ಅಂತರಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದಿಲ್ಲ. ಇವರ ಮಧ್ಯೆಯೇ ಒಬ್ಬ ಧೀರನಿರುತ್ತಾನೆ. ಅವನಿಗೆ ಅಮೃತತತ್ತ್ವವನ್ನು ಪಡೆದುಕೊಳ್ಳುವುದರಲ್ಲಿಯೇ ಆಸಕ್ತಿ. ಆದ್ದರಿಂದಲೇ ಅವನು ತನ್ನ ಗಮನವನ್ನು ಒಳಕ್ಕೆ ಹರಿಸುತ್ತಾನೆ. ಧ್ಯಾನ ಮಾಡುತ್ತಾನೆ. ಕ್ರಮೇಣ ತನ್ನ ಪ್ರತ್ಯಗಾತ್ಮನೇ ಬ್ರಹ್ಮತತ್ತ್ವವೆಂದು ತಿಳಿದುಕೊಳ್ಳುತ್ತಾನೆ. ಇದಕ್ಕೆ ವಿರುದ್ಧವಾಗಿ, ಬಾಲಕರಂತೆ ಇರುವ ಅಜ್ಞಾನಿಗಳು ಹೊರಗಿನ ಕಾಮನೆಯ ವಸ್ತುಗಳ ಮೇಲೆಯೇ ಮನಸ್ಸನ್ನು ಕೊಡುತ್ತಾರೆ. ಇದರಿಂದ ಯಾವತ್ತೂ ಅವಿದ್ಯೆಯ ಪಾಶದಲ್ಲಿ ಸಿಕ್ಕಿ ಜನನ-ಮರಣಗಳ ಸಂಕುಲದಲ್ಲಿ ಸಿಲುಕಿ ನರಳುತ್ತಾರೆ. ಆದರೆ ಧೀರರ ವಿಷಯವೇ ಬೇರೆ. ಅವರು ಅನಿತ್ಯವಾದ ವಸ್ತುಗಳ ನಡುವೆ ನಿತ್ಯವಾದ ಆತ್ಮತತ್ತ್ವವನ್ನು ಅರಿತುಕೊಳ್ಳಲು ಪ್ರಯತ್ನಿಸುತ್ತಾರೆ. ಆ ಮೂಲಕ ಅಮೃತತತ್ತ್ವವನ್ನು ಪಡೆದುಕೊಳ್ಳುತ್ತಾರೆ.

**ನಚಿಕೇತ:** ಹಾಗಾದರೆ ಇಂದ್ರಿಯಗಳನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳುವುದು ಹೇಗೆ?

**ಯಮ:** ಮಗೂ, ಯಾರ ಮನಸ್ಸು ನಿಯಂತ್ರಣದಲ್ಲಿ ಇರುವುದಿಲ್ಲವೋ, ಅವನಿಗೆ ಬುದ್ಧಿಯ ತಿಳಿವಳಿಕೆಯೂ ಇರುವುದಿಲ್ಲ. ಹೇಗೆ ತುಂಟ ಕುದುರೆಗಳನ್ನು ಸಾರಥಿಯು ವಶಮಾಡಿಕೊಳ್ಳಲು ಕಷ್ಟಪಡುತ್ತಾನೋ, ಹಾಗೆಯೇ ಮನಸ್ಸು ಕೂಡ ಇಂದ್ರಿಯಗಳನ್ನು ವಶಮಾಡಿಕೊಳ್ಳಲು ಅಶಕ್ತವಾಗುತ್ತದೆ. ಇದಕ್ಕೆ ವಿರುದ್ಧವಾಗಿ, ನಿಯಂತ್ರಣಗೊಂಡ ಮನಸ್ಸು ಯಾರಿಗೆ ಇರುತ್ತದೆಯೋ, ಅವನು ಸರಿಯಾದ ತಿಳಿವಳಿಕೆಯನ್ನೂ ಹೊಂದಿರುತ್ತಾನೆ. ಒಳ್ಳೆಯ ಕುದುರೆಗಳು ಸಾರಥಿಯ ವಶಕ್ಕೆ ಸುಲಭವಾಗಿ ಬರುತ್ತವೆ. ಅದೇ ರೀತಿ, ಮನಸ್ಸು ಮತ್ತು ತಿಳಿವಳಿಕೆಗಳು ಸಶಕ್ತವಾಗಿರುವಾಗ, ಇಂದ್ರಿಯಗಳು ಕೂಡ ಸುಲಭವಾಗಿ ವಶಕ್ಕೆ ಬರುತ್ತವೆ. ಇನ್ನು, ಯಾರಿಗೆ ನಿಯಂತ್ರಣಗೊಂಡ ಮನಸ್ಸು ಇರುವುದಿಲ್ಲವೋ, ಅವನಿಗೆ ತಿಳಿವಳಿಕೆಯೂ ಇರುವುದಿಲ್ಲ. ಅವನು ಅಶುಚಿಯಾಗಿ ಇರುತ್ತಾನೆ. ಅಂಥವನಿಗೆ ಆತ್ಮವು ಎಂದೂ ಅರಿವಿಗೆ ಬರುವುದಿಲ್ಲ. ಇದಲ್ಲದೆ, ಅವನು ಸಂಸಾರದಲ್ಲಿ ತೊಳಲಾಡುತ್ತಾನೆ. ಇದಕ್ಕೆ ವಿರುದ್ಧವಾಗಿ, ಸರಿಯಾದ ಮನಸ್ಸು ಮತ್ತು ತಿಳಿವಳಿಕೆ ಉಳ್ಳವನು ಯಾವತ್ತೂ ಪವಿತ್ರನಾಗಿರುತ್ತಾನೆ. ಅವನು ಮಾತ್ರವೇ ಮೋಕ್ಷವೆಂಬ ಪರಮಪದವನ್ನು ಹೊಂದುತ್ತಾನೆ. ಅವನು ಮತ್ತೆ ಹುಟ್ಟಿಬರುವುದಿಲ್ಲ. ಅವನು ಯಾವತ್ತೂ ಮುಕ್ತನಾಗಿ ಇರುತ್ತಾನೆ. ಹೀಗಾಗಿ ಮಗೂ, ಆತ್ಮ-ಅನಾತ್ಮ ವಿಜ್ಞಾನವೇ ಸಾರಥಿಯಾಗಿ ಯಾರಿಗೆ ಇರುವುದೋ, ನಿಯಂತ್ರಣವೆಂಬ ಹಗ್ಗವುಳ್ಳವನೋ, ಅವನೇ ಈ ಮನುಷ್ಯ ಜೀವನದ ಪರಮಗತಿಯಾದ ವಿಷ್ಣುವಿನ ಪರಮಪದವನ್ನು (ಸರ್ವವ್ಯಾಪಿಯಾದ ಬ್ರಹ್ಮಭಾವವನ್ನು) ಪಡೆದುಕೊಳ್ಳುತ್ತಾನೆ.

**ನಚಿಕೇತ :** ಯಮರಾಜ, ಮನಸ್ಸನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಧ್ಯಾನ ಮಾಡುವುದು ಹೇಗೆ?

**ಯಮರಾಜ:** ಮಗು, ತಿಳಿವಳಿಕೆ ಇರುವವನು ಈ ರೀತಿ ಧ್ಯಾನ ಮಾಡಲು ಪ್ರಯತ್ನಿಸಬೇಕು. ಅವನು ಮೊದಲು ತನ್ನ ವಾಕ್ ಅಥವಾ ಮಾತನ್ನು ಮನಸ್ಸಿನಲ್ಲಿ ಹಿಡಿದಿಡಬೇಕು. ಅಂದರೆ, ಮನಸ್ಸಿನ ಮೂಲಕ ನಮ್ಮ ಮಾತನ್ನು ನಿಯಂತ್ರಿಸಬೇಕು. ವಾಕ್ಕು ಮನಸ್ಸಿನಲ್ಲಿ ಲೀನವಾಗಬೇಕು. ಇಂಥ ಪರಿಪಕ್ವ

ಮನಸ್ಸನ್ನು ಬುದ್ಧಿಯಲ್ಲಿ ಹಿಡಿದಿಡಬೇಕು ಅಂದರೆ, ವಿಲೀನಗೊಳಿಸಬೇಕು. ಈ ಪರಿಪುಷ್ಟವಾದ ಬುದ್ಧಿಯನ್ನು ಎಲ್ಲ ಜೀವರಾಶಿಗಳ ಸಮಷ್ಟಿರೂಪವಾದ ಈಶ್ವರನಲ್ಲಿ ವಿಲೀನಗೊಳಿಸಬೇಕು. ಇದರರ್ಥ, ನಮ್ಮ ವೈಯಕ್ತಿಕತೆಯು ವಿಶ್ವಪ್ರಜ್ಞೆಯಲ್ಲಿ ಮುಳುಗಿ ವಿನಾಶವಾಗಬೇಕು. ಸಮಷ್ಟಿ ಆತ್ಮವೂ ಕೂಡ ಉಪಾಧಿಯುತವಾದುದು, ಸಗುಣರೂಪವಾದುದು. ಈ ಭಾವನೆಯನ್ನೂ ಮೀರಿ ಹೋಗಬೇಕು. ಸಮಷ್ಟಿ ಸಗುಣ ಈಶ್ವರ ಭಾವನೆಯನ್ನು ನಿರ್ಗುಣ, ನಿರ್ವಿಶೇಷ ಪರಬ್ರಹ್ಮ ಭಾವನೆಯಲ್ಲಿ ಲೀನಗೊಳಿಸಬೇಕು. ಇದೇ ಮುಖ್ಯ ಆತ್ಮ, ಇದೇ ಪರಬ್ರಹ್ಮ. ಇದೇ ನಿತ್ಯಸತ್ಯ, ಇದೇ ನಿಜವಾದ ತತ್ತ್ವ.

**ನಚಿಕೇತ:** ಈ ರೀತಿಯ ಧ್ಯಾನಮಾಡುವ ಅರ್ಹತೆಯನ್ನು ಪಡೆದುಕೊಳ್ಳಲು ಏನು ಮಾಡಬೇಕು, ಯಮರಾಜ?

**ಯಮರಾಜ:** ಪ್ರತಿಯೊಬ್ಬರೂ ಆತ್ಮಜ್ಞಾನವನ್ನು ಪಡೆದುಕೊಳ್ಳಲು ಪ್ರಯತ್ನಿಸಬೇಕು. ಇದಕ್ಕಾಗಿ ಇಡೀ ಮಾನವತೆಗೆ ನನ್ನ ಸಂದೇಶ ಇದು: **ಏಳಿರಿ, ಎಚ್ಚರವಾಗಿರಿ, ನಿಮಗಿಂತಲೂ ಶ್ರೇಷ್ಠರಾದ ಧೀರರನ್ನು ಸೇರಿ ತಿಳಿದುಕೊಳ್ಳಿರಿ.** ಆತ್ಮಜ್ಞಾನದ ಈ ಹಾದಿಯು ಕ್ಷೌರದ ಕತ್ತಿಯ ಅಲುಗಿನಂತೆ ತೀಕ್ಷ್ಣವಾದುದು. ದಾಟಲು ಅಶಕ್ಯವಾದುದು; ದುರ್ಗಮವಾದುದು. ಹೀಗೆಂದು ವಿದ್ವಾಂಸರು ಹೇಳುತ್ತಾರೆ. ಮಗೂ, ಹಾಗೆಯೇ ಬಹಳ ಹರಿತವಾದ ಬುದ್ಧಿಯಿಂದ ವಿಚಾರಮಾಡು, ಆತ್ಮನ ಆಸ್ತಿತ್ವದಲ್ಲಿ ಪರಿಪೂರ್ಣ ನಿಷ್ಠೆಯನ್ನು ಗಳಿಸಿಕೊ.

**ನಚಿಕೇತ:** ಆತ್ಮದ ಬಗ್ಗೆ ವಿಚಾರ ಮಾಡುವುದು ಹೇಗೆ, ಯಮರಾಜ?

**ಯಮರಾಜ:** ಇದನ್ನೂ ಹೇಳಿಕೊಡುತ್ತೇನೆ. ನೋಡು ಮಗು. ನಾನು ಈಗಾಗಲೇ ಹೇಳಿದ್ದೇನೆ. ಅನಿತ್ಯವಾದ ಪದಾರ್ಥಗಳ ಮಧ್ಯೆ ಆತ್ಮತತ್ತ್ವವೊಂದೇ ಶಾಶ್ವತವಾದುದು. ನಾವು ಕಣ್ಣಿನಿಂದ ರೂಪವನ್ನು ನೋಡುತ್ತೇವೆ; ಘ್ರಾಣೇಂದ್ರಿಯದಿಂದ ಗಂಧವನ್ನು ಮೂಸಿನೋಡುತ್ತೇವೆ. ಹಾಗೆಯೇ ಶಬ್ದ, ಸ್ಪರ್ಶ ಮುಂತಾದ ಅನುಭವಗಳನ್ನು ಪಡೆದುಕೊಳ್ಳುತ್ತೇವೆ. ಇದನ್ನು ಯಾವನು ಅನುಭವಿಸುತ್ತಾನೆ ಎಂದು ವಿಚಾರ ಮಾಡಬೇಕು, ಮಗೂ. ಹಾಗೆ ವಿಚಾರ ಮಾಡಿದಾಗ ನಮಗೆ ತಿಳಿದುಬರುತ್ತದೆ, ಇದನ್ನೆಲ್ಲ ಅರಿತುಕೊಳ್ಳುವವನು ಆತ್ಮವೇ. ಇವನಿಗಿಂತ ಬೇರೆಯ ಸತ್ಯತತ್ತ್ವವಿಲ್ಲ; ಹೆಚ್ಚಿನದೂ ಇಲ್ಲ. ಹಾಗೆಯೇ ಇನ್ನೊಂದು ರೀತಿಯಲ್ಲಿಯೂ ನಾವು ವಿಚಾರ ಮಾಡಬಹುದು. ಒಬ್ಬನು ಸ್ವಪ್ನವನ್ನು ಅನುಭವಿಸುತ್ತಾನೆ. ಅವನೇ ಜಾಗ್ರದವಸ್ಥೆಯನ್ನೂ ಅನುಭವಿಸುತ್ತಾನೆ. ಇವೆರಡೂ ಅವಸ್ಥೆಗಳನ್ನು ಅನುಭವಿಸುವ ಏಕಮಾತ್ರ ಅನುಭವಿ ಅದಾರು? ಅವನೇ ಆತ್ಮ. ಈಗ ಇನ್ನೊಂದು ರೀತಿಯಲ್ಲಿ ವಿಚಾರ ಮಾಡೋಣ. ಜೀವಿ ಅನ್ನಿಸಿಕೊಂಡವನು ತನ್ನ ಕರ್ಮಫಲಗಳಾದ ಸುಖ, ದುಃಖ, ಭಯ – ಇವುಗಳನ್ನು ಅನುಭವಿಸುತ್ತಾನೆ. ಅವನು ಇಂದ್ರಿಯ, ಮನಸ್ಸುಗಳ ಜೊತೆಗೆ ಕೂಡಿಕೊಂಡೇ ಅವುಗಳನ್ನು ಅನುಭವಿಸುತ್ತಾನೆ. ಈ ಇಂದ್ರಿಯ, ಮನಸ್ಸುಗಳನ್ನು ನಾವು ತೆಗೆದುಹಾಕಿಬಿಟ್ಟರೆ, ಸುಖದುಃಖಗಳ ಅನುಭವ ಆಗುವುದೇ ಇಲ್ಲ. ಈಗ ಉಳಿಯುವುದು ಯಾರು? ಅವನೇ ಆತ್ಮ. ಅವನನ್ನು ತಿಳಿದುಕೊಂಡ ಧೀರನು ಯಾವ ರೀತಿಯ ದುಃಖ, ಭಯಗಳನ್ನು ಹೊಂದುವುದಿಲ್ಲ. ಹೀಗಾಗಿ ಅವನು ತನ್ನನ್ನು ಕಾಪಾಡಿಕೊಳ್ಳಲು ಇಚ್ಛಿಸುವುದೂ ಇಲ್ಲ. ಏಕೆಂದರೆ, ಆತ್ಮವು ಅದ್ವೈತವು. ಹೀಗಾಗಿ ಅದು ನಿರ್ಭಯವಾದುದು. ಈಗ ಇದನ್ನೇ ಮತ್ತೊಂದು ರೀತಿಯಿಂದ ಆತ್ಮವನ್ನು ತಿಳಿದುಕೊಳ್ಳಬಹುದು. ಎಲ್ಲವೂ ಪರಮಾತ್ಮನಿಂದಲೇ ಹುಟ್ಟಿದೆ. ಆ ಪರಮತತ್ತ್ವವೇ ತಾನು ಹುಟ್ಟಿಸಿರುವ ಪ್ರತಿಯೊಂದು ಜೀವಿಯ ಬುದ್ಧಿಗುಹೆಯನ್ನು ಪ್ರವೇಶಿಸುತ್ತಾನೆ. ಆ ಬುದ್ಧಿಗುಹೆಯಲ್ಲಿ ಅವನು ಗರ್ಭಿಣಿಯರಲ್ಲಿ ಇರುವ ಗರ್ಭದಂತೆ ಅಡಗಿರುತ್ತಾನೆ. ಕಟ್ಟಿಗೆಗಳಲ್ಲಿ ಇರುವ ಅಗ್ನಿಯಂತೆ ಹುದುಗಿರುತ್ತಾನೆ. ಅವನೇ ಪ್ರತಿಯೊಬ್ಬರಿಂದಲೂ ಆರಾಧಿಸಲ್ಪಡುವ ಅಗ್ನಿಯಲ್ಲಿಯೂ ಗೂಢನಾಗಿರುತ್ತಾನೆ. ಅವನೇ ಪ್ರತಿಯೊಬ್ಬನ ಹೃದಯಗುಹೆ ಅಥವಾ ಬುದ್ಧಿಗುಹೆಯಲ್ಲಿಯೂ ಅಡಗಿಕೊಂಡು ಇರುತ್ತಾನೆ. ಅಲ್ಲಿಯೇ ಅವನನ್ನು ನಾವು ಧ್ಯಾನ ಮಾಡಬೇಕು.

**ನಚಿಕೇತ :** ಆತ್ಮಜ್ಞಾನದ ಸಾಧನವಾದ ಯೋಗದ ಲಕ್ಷಣಗಳು ಯಾವುವು, ಯಮರಾಜ?

**ಯಮರಾಜ:** ಮಗೂ, ನಚಿಕೇತ. ಇಂದ್ರಿಯಗಳನ್ನು ಸ್ಥಿರವಾಗಿ ಇಟ್ಟುಕೊಂಡಿರುವುದನ್ನೇ ಯೋಗವೆಂದು ಕರೆಯುವುದು. ಅಲ್ಲಿ ಯಾವ ಪ್ರಮಾದಕ್ಕೂ ಅವಕಾಶ ಇರುವುದಿಲ್ಲ. ಸಾಧಕನು ತನ್ನ ಬಾಹ್ಯ ಮತ್ತು ಅಂತಃಕರಣಗಳನ್ನು ಬಹಳ ಜಾಗರೂಕತೆಯಿಂದ ನಿಯಂತ್ರಣದಲ್ಲಿ ಇಟ್ಟುಕೊಳ್ಳಬೇಕು. ಏಕೆಂದರೆ, ಯೋಗದಲ್ಲಿ ಏಳುಬೀಳುಗಳು ಇದ್ದೇ ಇರುತ್ತವೆ. ಹೀಗಿರುವಾಗ, ಸಾಧಕನು ಬಹಳ ಎಚ್ಚರಿಕೆಯಿಂದ ಇರಬೇಕು.

**ನಚಿಕೇತ:** ಯಮರಾಜ, ಆತ್ಮಜ್ಞಾನಿಯ ಲಕ್ಷಣಗಳು ಯಾವುವು?

**ಯಮರಾಜ:** ಮಗೂ ನಚಿಕೇತ, ಒಂದು ಪಾತ್ರೆಯಲ್ಲಿನ ಶುದ್ಧನೀರಿನಲ್ಲಿ, ಇನ್ನೊಂದು ಪಾತ್ರೆಯಲ್ಲಿನ ಶುದ್ಧನೀರನ್ನು ಹಾಕಿದಾಗ ಇವೆರಡೂ ಒಂದೇ ಆಗುತ್ತವೆ. ಇವುಗಳಲ್ಲಿ ಯಾವ ಭೇದವೂ ಕಾಣುವುದಿಲ್ಲ. ಇದರಂತೆಯೇ ಆತ್ಮಜ್ಞಾನಿಯು ಆತ್ಮನೇ ಆಗುವನು. ಆತ್ಮಜ್ಞಾನಿ ಮತ್ತು ಆತ್ಮ — ಇವುಗಳ ನಡುವೆ ಯಾವ ಭೇದವೂ ಇರುವುದಿಲ್ಲ. ತಮ್ಮಲ್ಲಿರುವ ಆತ್ಮವನ್ನು ಕಂಡುಕೊಂಡ ಧೀರರಿಗೆ ಮಾತ್ರವೇ ಶಾಶ್ವತವಾದ ಸುಖವೇ ಹೊರತು, ಬೇರೆ ಯಾರಿಗೂ ಅಲ್ಲ. ಆ ಸಮಯದಲ್ಲಿ ಅವನ ಹೃದಯಗ್ರಂಥಿಗಳೆಲ್ಲ ಭಿನ್ನವಾಗುವವು. ಆಗ ಮರ್ತ್ಯನು ಅಮೃತನಾಗುವನು.

*(ನಚಿಕೇತನು ಯಮರಾಜನಿಗೆ ಸಾಷ್ಟಾಂಗ ನಮಸ್ಕಾರ ಮಾಡುವನು. ಯಮನು ಆಶೀರ್ವಾದ ಮಾಡುವನು. ನಚಿಕೇತನ ಮುಖವು ಬ್ರಹ್ಮತೇಜಸ್ಸಿನಿಂದ ಬೆಳಗುತ್ತಿರುವುದು. ಅವನು ಮಹದಾನಂದದಿಂದ ಕೈಗಳನ್ನು ಮೇಲೆತ್ತಿ ಓಡಾಡುತ್ತಿರುವನು.)*

**ಹಿಂಬದಿಯ ದನಿ:** ಮೃತ್ಯುದೇವತೆಯಾದ ಯಮನು ಉಪದೇಶ ಮಾಡಿದ ಆತ್ಮಯೋಗದ ವಿಧಾನಗಳನ್ನು ನಚಿಕೇತನು ಕಲಿತುಕೊಂಡನು. ಬ್ರಹ್ಮಭಾವವನ್ನು ಹೊಂದಿದನು; ಪಾಪರಹಿತನಾದನು; ಮೃತ್ಯುವನ್ನು ಗೆದ್ದುಕೊಂಡನು. ಯಾರು ಈ ಅಧ್ಯಾತ್ಮ ವಿದ್ಯೆಯನ್ನು ಈಗಲೂ ಅರಿತುಕೊಳ್ಳುವರೋ, ಅವರು ಕೂಡ ನಚಿಕೇತನಂತೆಯೇ ಬ್ರಹ್ಮಭಾವವನ್ನು ಪಡೆದುಕೊಳ್ಳುವರು; ಬ್ರಹ್ಮಾನಂದವನ್ನು ಹೊಂದುವರು.

*(ಬೆಳಕು ನಿಧಾನವಾಗಿ ಕಡಮೆಯಾಗುವುದು. ಓಂಕಾರ ನಾದವು ಎಲ್ಲೆಡೆ ಪಸರಿಸುವುದು. '**ಓಂ ಸಹನಾಭವತು**' ಮಂತ್ರದ ಉಚ್ಚಾರಣೆ ಎಲ್ಲೆಡೆ ಕೇಳಿಸುವುದು.)*

**(ಮುಗಿಯಿತು)**



# ಶಿಷ್ಯಂದಿರ ತರಬೇತಿ

**ಕಥೆ: ಸ್ವಾಮಿ ವಿಮೂರ್ತಾನಂದ**

**ಚಿತ್ರ : ಪದ್ಮವಾಸನ್**

**1**

ಶ್ರೀ ರಾಮಕೃಷ್ಣರು ತಮ್ಮ ಶಿಷ್ಯಂದಿರಿಗೆ ಅವರವರ ಸ್ವಭಾವಕ್ಕೆ ತಕ್ಕಂತೆ ತರಬೇತಿ ನೀಡುವುದರಲ್ಲಿ ಹೆಸರುವಾಸಿಯಾಗಿದ್ದರು.

**2**

ಶ್ರೀ ರಾಮಕೃಷ್ಣರು ಆಗ ದಕ್ಷಿಣೇಶ್ವರದಲ್ಲಿ ವಾಸಿಸುತ್ತಿದ್ದರು. ಆಗ ಅವರ ಬಗ್ಗೆ ಜನರು ತಿಳಿದುಕೊಳ್ಳಲು ಆರಂಭಿಸಿದ್ದರು. ಅವರು ಆತ್ಮಸಾಕ್ಷಾತ್ಕಾರ ಪಡೆದವರೆಂದೂ ಅವರು ಭಗವಂತನ ಅವತಾರವೆಂದೂ ಹಲವರು ಭಾವಿಸಿದ್ದರು. ಒಂದು ದಿನ ಶ್ರೀರಾಮಕೃಷ್ಣರ ಶಿಷ್ಯನಾಗಿದ್ದ ಯುವಕ ಯೋಗಿನ್ ದಕ್ಷಿಣೇಶ್ವರಕ್ಕೆ ಹೋಗುತ್ತಿದ್ದ. ದೋಣಿಯ ಮೂಲಕ ಅವನು ಗಂಗಾನದಿಯನ್ನು ದಾಟುತ್ತಿದ್ದನು. ಅವನೊಂದಿಗೆ ಪ್ರಯಾಣ ಮಾಡುತ್ತಿದ್ದ ಇತರರಲ್ಲಿ ಒಬ್ಬ ಹೀಗೆ ಹೇಳಿದ:




**3**

ಅವರಲ್ಲಿ ವಿಶೇಷತೆಯೇನಿದೆ? ಅವರು ನಮ್ಮ ಹಾಗೇ ಊಟ ಮಾಡುತ್ತಾರೆ, ಚೆನ್ನಾಗಿ ವೇಷಭೂಷಣ ಹಾಕಿಕೊಳ್ಳುತ್ತಾರೆ. ಚಪ್ಪಲಿ ಕೂಡ ಧರಿಸುತ್ತಾರೆ. ತಮಾಷೆ ಮಾಡುತ್ತ ಮಾತನಾಡುತ್ತಾರೆ. ಇಂಥವರು ಹೇಗೆ ಅವತಾರವಾಗುತ್ತಾರೆ? ಇದಕ್ಕಿಂತ ದೊಡ್ಡ ತಮಾಷೆ ಇನ್ನೇನಿದೆ!



ಯುವಕ ಯೋಗಿನ್ ಅದನ್ನು ಕೇಳಿಸಿಕೊಂಡ. ಅವರನ್ನು ತಡೆಯಲು ಸಾಧ್ಯವಾಗದೆ, ಅವನು ಮೌನವಾಗಿದ್ದ. ಅವರ ಮಾತುಗಳು ಶ್ರೀರಾಮಕೃಷ್ಣರನ್ನು ಏನೂ ಮಾಡಲಾರವು ಎಂದು ಅವನು ಭಾವಿಸಿದ್ದ.

**4**

ದಕ್ಷಿಣೇಶ್ವರಕ್ಕೆ ಬಂದು ತಲುಪಿದ ಮೇಲೆ ಅಲ್ಲಿ ನಡೆದ ಘಟನೆಯನ್ನು ಶ್ರೀರಾಮಕೃಷ್ಣರಿಗೆ ವಿವರಿಸಿ ಹೇಳಿದ ಯೋಗಿನ್.



5

ಗುರುದೇವ, ಅವರು ಅಜ್ಞಾನಿಗಳು. ಆದ್ದರಿಂದಲೇ ಅವರು ನಿಮ್ಮನ್ನು ಕುರಿತು ಕೆಟ್ಟ ಮಾತುಗಳನ್ನು ಆಡಿದರು. ಅವರ ಬಗ್ಗೆ ನಾವೇಕೆ ತಲೆ ಕೆಡಿಸಿಕೊಳ್ಳಬೇಕು?

ಏನು? ನಿಮ್ಮ ಗುರುವಾದ ನನ್ನನ್ನು ಕುರಿತು ಜನರು ಕೆಟ್ಟ ಮಾತುಗಳನ್ನಾಡಿದರೆ ನೀನು ಅದನ್ನು ಕೇಳಿ ಸುಮ್ಮನೆ ಇದ್ದೆಯಾ? ನಾಚಿಕೆ ಇಲ್ಲ ನಿನಗೆ. ನೀನು ಯಾಕೆ ಪ್ರತಿಭಟಿಸಲಿಲ್ಲ? ಧೈರ್ಯವಾಗಿ ಅವರ ಬಾಯಿ ಮುಚ್ಚಿಸಬೇಕಿತ್ತು. ಗುರುವಿನ ನಿಂದೆ ಕೇಳುವುದು ಪಾಪ.

ಹೀಗೆ ಶ್ರೀರಾಮಕೃಷ್ಣರು ಅಂಜುಕುಳಿ ಸ್ವಭಾವದ ಯೋಗಿನ್ ಮನಸ್ಸಿಗೆ ಧೈರ್ಯವನ್ನು ತುಂಬಿದರು.

6

ಕೆಲವು ದಿನಗಳ ನಂತರ ಅದೇ ರೀತಿಯ ಇನ್ನೊಂದು ಘಟನೆ ನಡೆಯಿತು. ದೋಣಿಯಲ್ಲಿ ಕೆಲವು ಮಂದಿ ಶ್ರೀರಾಮಕೃಷ್ಣರ ಬಗ್ಗೆ ಕೆಟ್ಟ ಮಾತುಗಳನ್ನಾಡುತ್ತಿದ್ದರು. ಆಗ ಶ್ರೀರಾಮಕೃಷ್ಣರ ಇನ್ನೊಬ್ಬ ಶಿಷ್ಯನಾದ ನಿರಂಜನ ಅಲ್ಲಿದ್ದ.

ಇದು ನಿಜವೆ? ಶ್ರೀರಾಮಕೃಷ್ಣರು ನಾಟಕಗಳಲ್ಲಿ ನಟನೆ ಮಾಡುವ ಜನರಂತಹ ಪಾಪಿಗಳನ್ನು ಉದ್ಧರಿಸಲು ಭೂಮಿಗೆ ಅವತರಿಸಿ ಬಂದರಂತೆ, ಹೌದೆ?

ಓ! ಇದು ನಿಜವಾಗಿಯೂ ತಮಾಷೆ!

7

ದೃಢಕಾಯದಿಂದ ಕೂಡಿದ್ದ ನಿರಂಜನನು ಸಿಡಿದು ನಿಂತು, ಆ ರೀತಿ ಮಾತನಾಡಬಾರದೆಂದು ಎಚ್ಚರಿಸಿದ..

ಇಲ್ಲಿ ಕೇಳಿ! ನನ್ನ ಗುರುಗಳ ಬಗ್ಗೆ ಇನ್ನೊಂದು ಮಾತನ್ನು ಆಡುವ ಧೈರ್ಯ ಮಾಡಬೇಡಿ. ಹಾಗೆ ಮಾಡಿದರೆ ಈ ದೋಣಿಯನ್ನೇ ಮುಳುಗಿಸಿಬಿಡುತ್ತೇನೆ. ಯಾರೊಬ್ಬರೂ ಉಳಿಯಲಾರಿರಿ.

8

ಅವರು ಅವನ ಮಾತನ್ನು ಕೇಳಲಿಲ್ಲ. ಆಗ ನಿರಂಜನನು ಜೋರಾಗಿ ದೋಣಿಯನ್ನು ಅಲುಗಾಡಿಸಿದ. ಎಲ್ಲರೂ ಪ್ರಾಣಭಯದಿಂದ ಹೆದರಿಬಿಟ್ಟರು.

ಹೀಗೆ ಮಾಡಬೇಡಪ್ಪಾ, ನಿಲ್ಲಿಸು. ನಿನ್ನ ಗುರುಗಳ ಬಗ್ಗೆ ಇನ್ನು ಮುಂದೆ ನಾವು ಏನೂ ಮಾತನಾಡುವುದಿಲ್ಲ. ದಯವಿಟ್ಟು ನಮ್ಮ ಜೀವವನ್ನು ಉಳಿಸು...

**9** ದಕ್ಷಿಣೇಶ್ವರಕ್ಕೆ ಬಂದ ಮೇಲೆ ನಿರಂಜನನು ಗುರುಗಳ ಮುಂದೆ ನಡೆದ ಘಟನೆಯನ್ನು ವಿವರಿಸಿದ.




**10** ಆಗ ಗುರುಗಳ ಮುಂದಿದ್ದವರೆಲ್ಲ ಯೋಗಿನ್‌ಗೆ ಅವರು ಕೊಟ್ಟ ಉಪದೇಶವನ್ನು ನೆನೆದರು. ಆದರೆ ಈಗ...




**11** ಹೀಗೆ ಶ್ರೀರಾಮಕೃಷ್ಣರು ತಮ್ಮ ಶಿಷ್ಯಂದಿರ ಸ್ವಭಾವಕ್ಕನುಗುಣವಾಗಿ ತರಬೇತಿ ನೀಡಿದರು — ಅಂಜುಬುರುಕ ಸ್ವಭಾವದವರಿಗೆ ಧೈರ್ಯವನ್ನೂ, ವೀರ ಸ್ವಭಾವದವರಿಗೆ ಮೃದುತ್ವವನ್ನು ಕಲಿಸಿದರು.

**12** ಒಂದು ಸಲ ಶ್ರೀರಾಮಕೃಷ್ಣರ ಗೃಹಸ್ಥ ಭಕ್ತರಾಗಿದ್ದ ನಾಗ ಮಹಾಶಯರು ಬೇಲೂರು ಮಠಕ್ಕೆ ದೋಣಿಯಲ್ಲಿ ಬರುತ್ತಿದ್ದರು. ಹಿಂದೆ ಸ್ವಾಮಿ ವಿವೇಕಾನಂದರು ಅವರನ್ನು ಕುರಿತು, ''ಅವರು ತುಂಬಾ ವಿನಯಶಾಲಿ. ಅವರಲ್ಲಿ ಸ್ವಲ್ಪವೂ ಅಪ್ರಮಾಣಿಕತೆಯಿಲ್ಲ'' ಎಂದಿದ್ದರು. ಮಠವನ್ನು ದೂರದಿಂದಲೇ ನೋಡುತ್ತ ...



**13** ಅವರು ದೋಣಿಯಲ್ಲೇ ಬೇಲೂರು ಮಠಕ್ಕೆ ನಮಸ್ಕರಿಸಿದರು. ಅವರ ಜೊತೆಗೆ ಇದ್ದ ಪ್ರಯಾಣಿಕರು ಅವರನ್ನು ನೋಡಿ ನಕ್ಕರು.




**14** ಅವರ ಮಾತುಗಳನ್ನು ಕೇಳಿದ ನಾಗಮಹಾಶಯ, ಹಾಗೆ ಸಾಧುಗಳ ಬಗ್ಗೆ ಟೀಕೆ ಮಾಡಬಾರದೆಂದು ಅವರಿಗೆ ತಿಳಿಯಹೇಳಿದರು.




**15** ನಾಗಮಹಾಶಯರು ಮಾನವನ ಸೇವೆ ಮಾಡುವುದೂ ಕೂಡ ಹೇಗೆ ದೇವರ ಪೂಜೆ ಎಂಬುದನ್ನು ಅವರಿಗೆ ವಿವರಿಸಿ ಹೇಳಿದರು. ಎಷ್ಟು ಹೇಳಿದರೂ ಅವರು ತಮ್ಮ ವಿಚಾರವನ್ನು ಪಟ್ಟು ಬಿಡದೆ ಸಾಧಿಸು ತ್ತಿದ್ದುದನ್ನು ಕಂಡು ಅವರಿಗೆ ಕೋಪ ಬಂತು....




**16** ಅವರ ಪ್ರಾಮಾಣಿಕತೆಯನ್ನು ನೋಡಿ ಉಳಿದವರೆಲ್ಲ ಸ್ತಂಭಿತರಾದರು. ಅವರ ಮಾತುಗಳನ್ನು ಅವರು ಸ್ವೀಕಾರ ಮಾಡಲೇಬೇಕಾಯಿತು. ನಂತರ ಅವರೆಲ್ಲ ನಾಗಮಹಾಶಯರನ್ನು ಗೌರವಿಸಿದರು.




'ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ' – ' ವಜ್ರಕ್ಕಿಂತಲೂ ಕಠೋರ; ಹೂವಿಗಿಂತಲೂ ಮೃದು' — ಭವಭೂತಿ, *('ಉತ್ತರರಾಮಚರಿತ' ದಲ್ಲಿ)*







# ಬೆಳಗಾವಿ ರಾಮಕೃಷ್ಣ ಮಿಷನ್ನಿನಲ್ಲಿ 'ಸ್ವಾಮಿ ವಿವೇಕಾನಂದ ಸ್ಮಾರಕ'ದ ಉದ್ಘಾಟನೆ

ಸ್ವಾಮಿ ವಿವೇಕಾನಂದರು ತಮ್ಮ ಪರಿವ್ರಾಜಕ ದಿನಗಳಲ್ಲಿ, ಅಂದರೆ ೧೮೯೨ರ ಅಕ್ಟೋಬರ್ ೧೬ರಿಂದ ೨೭ರ ವರೆಗೆ ಬೆಳಗಾವಿಗೆ ಭೇಟಿಯಿತ್ತರು. ಈ ಸಂದರ್ಭದಲ್ಲಿ ಅವರು ಎರಡು ನಿವಾಸಗಳಲ್ಲಿ ತಂಗಿದ್ದು, ಮೊದಲ ೩ ದಿನಗಳನ್ನು (ಅಕ್ಟೋಬರ್ ೧೬ ರಿಂದ ೧೮) ವಕೀಲರಾಗಿದ್ದ ಶ್ರೀ ಸದಾಶಿವ ಬಾಲಕೃಷ್ಣ ಭಾಟೆಯವರ ಮನೆಯಲ್ಲಿ ಕಳೆದರು. ಅವರ ಪುತ್ರ ಶ್ರೀ ಜಿ.ಎಸ್. ಭಾಟೆಯವರು ಸ್ವಾಮೀಜಿಯವರು ಬೆಳಗಾವಿಗೆ ಭೇಟಿಯಿತ್ತ ಸಮಯದಲ್ಲಿ ಎಳೆಯ ಹುಡುಗನಾಗಿದ್ದನು. ಸ್ವಾಮೀಜಿಯವರ ಈ ಭೇಟಿಯನ್ನು ಕುರಿತಂತೆ ಅವನು ಬರೆದ ಸ್ಮೃತಿಚಿತ್ರವನ್ನು 'ಸ್ವಾಮಿ ವಿವೇಕಾನಂದರ ದಿವ್ಯಸ್ಮೃತಿ' ಗ್ರಂಥದಲ್ಲಿ ಕಾಣಬಹುದು. ಕಾಲಕ್ರಮೇಣ ಭಾಟೆಯವರ ಮನೆಯ ಮಾಲೀಕತ್ವ ಹಲವು ಬಾರಿ ಬದಲಾಯಿತು. ೧೯೮೭ರಲ್ಲಿ ಮನೆಯ ಮಾಲೀಕರಾಗಿದ್ದ ನಿವೃತ್ತ ನ್ಯಾಯಮೂರ್ತಿಗಳಾದ ಶ್ರೀ ಬಲವಂತ ಡಿ. ಬೆಳ್ವಿಯವರು ಸ್ವಾಮೀಜಿ ವಾಸವಾಗಿದ್ದ ಕೋಣೆಯೂ ಸೇರಿದಂತೆ, ಈ ಮನೆಯ ಮೂರನೇ ಒಂದು ಭಾಗವನ್ನು ಕಾರವಾರದಲ್ಲಿನ ಖಾಸಗಿ ರಾಮಕೃಷ್ಣ ಕೇಂದ್ರಕ್ಕೆ ಕಾಣಿಕೆಯಾಗಿ ನೀಡಿದರು. ೨೦೦೬ರಲ್ಲಿ ಇದನ್ನು ಬೆಳಗಾವಿ ರಾಮಕೃಷ್ಣ ಮಿಷನ್ನಿಗೆ ಹಸ್ತಾಂತರಿಸಲಾಯಿತು. ಬಳಿಕ ಬೆಳಗಾವಿ ರಾಮಕೃಷ್ಣ ಮಿಷನ್ ಅಲ್ಲಿ ಉಪಕೇಂದ್ರವನ್ನು ಆರಂಭಿಸಿತು. ೨೦೧೪ರಲ್ಲಿ ಮಿಷನ್ ಈ ಮನೆಯ ಉಳಿದ ಭಾಗಗಳನ್ನೂ ಖರೀದಿಸಿ, ಇಡೀ ಕಟ್ಟಡದ ಒಡೆತನವನ್ನು ಹೊಂದಿತು.

ಹಲವು ಮಂದಿ ಭಕ್ತರ, ಹಿತೈಷಿಗಳ ಹಾಗೂ ಭಾರತ, ಕರ್ನಾಟಕ ಸರ್ಕಾರ ನೀಡಿದ ದೇಣಿಗೆಗಳ ನೆರವಿನಿಂದ ಈ ಕಟ್ಟಡದ ದುರಸ್ತಿ ಹಾಗೂ ನವೀಕರಣ ಕಾರ್ಯ ಕೊನೆಗೊಂಡು, ೨೦೧೯ರ ಫೆಬ್ರವರಿ ೧ರಂದು ಈ ನವೀಕೃತ ನಿವಾಸ '**ಸ್ವಾಮಿ ವಿವೇಕಾನಂದ ಸ್ಮಾರಕ**'ವನ್ನು ಉದ್ಘಾಟಿಸಲಾಯಿತು. ರಾಮಕೃಷ್ಣ ಮಠ ಮತ್ತು ಮಿಷನ್ನಿನ ಪ್ರಧಾನ ಕಾರ್ಯದರ್ಶಿಗಳಾದ ಪೂಜ್ಯ ಸ್ವಾಮಿ ಸುವೀರಾನಂದಜಿ ಮಹಾರಾಜ್ ಉದ್ಘಾಟನೆಯನ್ನು ನೆರವೇರಿಸಿಕೊಟ್ಟರು. ೩ ದಿನಗಳ ಈ ಕಾರ್ಯಕ್ರಮದಲ್ಲಿ ಸುಮಾರು ೮೦ ಮಂದಿ ಸಂನ್ಯಾಸಿಗಳು ಹಾಗೂ ಬೃಹತ್ ಪ್ರಮಾಣದ ಭಕ್ತರು ಭಾಗವಹಿಸಿದ್ದರು. ಉದ್ಘಾಟನಾ ಕಾರ್ಯಕ್ರಮದೊಂದಿಗೆ **ಯುವ ಸಮ್ಮೇಳನ, ಭಕ್ತ ಸಮ್ಮೇಳನ,** ಪ್ರವಚನ, ಸಂಗೀತ ಹಾಗೂ ಇನ್ನಿತರ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. 'ಯುವ ಸಮ್ಮೇಳನ'ದಲ್ಲಿ ೧೨೦೦ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದರು. 'ಭಕ್ತ ಸಮ್ಮೇಳನ'ದಲ್ಲಿ ೬೦೦ ಕ್ಕೂ ಹೆಚ್ಚು ಮಂದಿ ಭಕ್ತರು ಭಾಗವಹಿಸಿದ್ದರು.

**'ಸ್ವಾಮಿ ವಿವೇಕಾನಂದ ಸ್ಮೃತಿಭವನ'ದ ಚಟುವಟಿಕೆಗಳು:**

* ಸ್ವಾಮಿ ವಿವೇಕಾನಂದರು ವಾಸವಾಗಿದ್ದ ಕೋಣೆಯಲ್ಲಿ ಅವರು ಬಳಸಿದ್ದ ಹಾಸಿಗೆ, ಕನ್ನಡಿ ಹಾಗೂ ದಂಡ – ಇವನ್ನು ಇಡಲಾಗಿದೆ.
* ದಿವ್ಯತ್ರಯರ ಚಿತ್ರಗಳನ್ನು ಒಳಗೊಂಡ ದೇಗುಲವನ್ನು ಇಲ್ಲಿ ನಿರ್ಮಿಸಲಾಗಿದೆ.
* ಶಾಶ್ವತ ಮ್ಯೂಸಿಯಂ : ಭಾರತೀಯ ಆಧ್ಯಾತ್ಮಿಕ ಪರಂಪರೆ, ಸ್ವಾಮೀಜಿ ಜೀವನ-ಸಂದೇಶ, ಅವರ ಬೆಳಗಾವಿ ಭೇಟಿ ಇತ್ಯಾದಿಗಳನ್ನು ಚಿತ್ರಿಸುವ ಚಿತ್ರ ಪ್ರದರ್ಶನವನ್ನು ಸ್ಥಾಪಿಸಲಾಗಿದೆ.
* ದೃಶ್ಯ-ಶ್ರಾವ್ಯ ಮಾಧ್ಯಮವನ್ನು ಬಿತ್ತರಿಸುವ ಕೋಣೆ.









Managing Editor : Swami Atmajnananda
Editor : Swami Jnanayogananda
Printed and Published by Swami Atmajnananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಆರ್ಕಿಡ್ ಟ್ರಾವೆಲ್ & ಟೂರ್ಸ್

Orchid
Travel & Tours

**www.orchidtours.net**



## 8 ದಿನಗಳ ಶ್ರೀ ಮುಕ್ತಿನಾಥ ಯಾತ್ರೆ (ಸಾಲಿಗ್ರಾಮಂ) ಬೆಂಗಳೂರಿನಿಂದ ವಿಮಾನದಲ್ಲಿ

ಪ್ರವಾಸ ಸ್ಥಳಗಳು : ಶ್ರೀ ಮುಕ್ತಿನಾಥ ದೇವಸ್ಥಾನ, ಪಶುಪತಿನಾಥ ದೇವಸ್ಥಾನ, ಜಲನಾರಾಯಣ ದೇವಸ್ಥಾನ, ಶ್ರೀ ಕೃಷ್ಣ ದೇವಸ್ಥಾನ, ಕಠ್ಮಂಡು ಸಿಟಿ ಟೂರ್, ಪೋಕ್ರಾ-ಬಿಂದಾಬಾಸಿನಿ ದೇವಸ್ಥಾನ, ತಾಲಭೈರವಿ ದೇವಸ್ಥಾನ, ದೋಣಿಯಲ್ಲಿ ಪೋಕ್ರಾ ಲೇಕ್ ಒಂದು ವಿಹಾರ, ಮನೋಕಾಮನ ದೇವಸ್ಥಾನ (ಕೇಬಲ್ ಕಾರ್‌ನಲ್ಲಿ)



## 11 ದಿನಗಳ ಸಿಂಗಾಪುರ-ಮಲೇಶಿಯ-ಥೈಲ್ಯಾಂಡ್ ಪ್ರವಾಸ

**ಸಿಂಗಾಪುರ** : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್ ಜೊತೆಗೆ ಸಿ ಅಕ್ವೇರಿಯಂ, ವಿಂಗ್ಸ್ ಆಫ್ ಟೈಮ್, ಜುರೋಂಗ್ ಬರ್ಡ್‌ಪಾರ್ಕ್, ಯುನಿವರ್ಸಲ್ ಸ್ಟುಡಿಯೋ,

**ಮಲೇಶಿಯ** : ಕೌಲಾಲಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ, ಜಂಟಿಂಗ್ ಹೈಲ್ಯಾಂಡ್, ಕೆ.ಎಲ್. ಟವರ್

**ಥೈಲ್ಯಾಂಡ್** : ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್, ಮರೀನಾ ಪಾರ್ಕ್, ವಾಕರ್ ಸ್ಟ್ರೀಟ್



## 15 ಮತ್ತು 18 ದಿನಗಳ ಗ್ರ್ಯಾಂಡ್ ಯು.ಕೆ.-ಯುರೋಪ್ ಪ್ರವಾಸ

ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್, ಆಸ್ಟ್ರೀಯಾ, ಲಿಚೆನ್‌ಟೆನ್‌ಸ್ಟೈನ್, ಇಟಲಿ, ವ್ಯಾಟಿಕನ್



## 18 ಮತ್ತು 12 ದಿನಗಳ ಅಮೇರಿಕಾ ಪ್ರವಾಸ

ಪ್ರವಾಸ ಸ್ಥಳ : ನ್ಯೂಯಾರ್ಕ್, ವಾಷಿಂಗ್ಟನ್, ನಯಾಗರ ಫಾಲ್ಸ್, ಲಾಸ್‌ವೇಗಾಸ್, ಲಾಸ್ ಎಂಜಲೀಸ್, ಸ್ಯಾನ್‌ಫ್ರಾನ್ಸಿಸ್ಕೋ



## 8 ದಿನಗಳ ಕಾಂಬೋಡಿಯಾ ಥೈಲ್ಯಾಂಡ್ ಪ್ರವಾಸ

ಪ್ರವಾಸ ಸ್ಥಳ : ಕಾಂಬೋಡಿಯಾ – ಸಿಯಾಮ್‌ರಿಪ್, ಅಂಕೊರ್‌ವಾಟ್, ಟೋನ್ ಸ್ಯಾಪ್ ಸರೋವರ, ತಾಪ್ರಾಮ್, ಬಯಾನ್, ಬಪೂನ್ ದೇವಾಲಯಗಳು, ಥೈಲ್ಯಾಂಡ್ – ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್, ವಾಕರ್ ಸ್ಟ್ರೀಟ್



## 7 ದಿನಗಳ ರಷ್ಯಾ ಪ್ರವಾಸ

ಮಾಸ್ಕೋ : ಕ್ರೆಮ್‌ಲಿನ್ ಗ್ರೌಂಡ್, ರೆಡ್ ಸ್ಕ್ವೇರ್, ರಷ್ಯಾ ಸರ್ಕಸ್, ಅಂಡರ್‌ಗ್ರೌಂಡ್ ಟೂರ್ ಆಫ್ ಮಾಸ್ಕೊ (ಮೆಟ್ರೊ), ಸಿಟಿ ಟೂರ್

ಸೆಂಟ್ ಪೀಟರ್ಸ್‌ಬರ್ಗ್ : ಗ್ರ್ಯಾಂಡ್ ಪ್ಯಾಲೇಸ್, ಪೀಟರ್ ಓಫ್ ಗಾರ್ಡನ್, ಹರ್ಮಿಟೇಜ್ ಮ್ಯೂಸಿಯಂ, ನೇವ ಬೋಟ್ ರೈಡ್, ಸೈಂಟ್ ಐಸಾಕ್ಸ್ ಕೆಥಡ್ರಲ್, ಸಿಟಿ ಟೂರ್




BASAVANAGUDI
#98, 1st Floor, DVG Road
Office 080-26621983, 26617178
**Mobile +91 9900080793 / 9880079588**

***For more details please Contact :***




MALLESHWARAM
# 198, 1st Floor, 11th Cross
Office 080 - 23445598, 23445559
**Mobile +91 9900080791 / 9880079644**

VIVEKA PRABHA (KANNADA MONTHLY)
March 2019, Vol.20, No.03, No.of pages: 44

Registered With Registrar of News Papers of India under 72356/2000.postal Regn.No.KA/SK/MYS/480/2018-20. LICENCED TO POST W.P.P. AT YADAVAGIRI MYSORE 570 020. VIDE LICENCE NO. SK/WPP/MYS.155/2018-20




Vidyavardhaka Sangha (R), Mysuru

# VIDYAVARDHAKA COLLEGE OF ENGINEERING

(Affiliated to VTU, Belgaum and Approved by AICTE, New Delhi)






Accredited by NAAC with 'A' Grade

## COURSES OFFERED

**BE**
- Electronics & Communication Engineering
- Computer Science & Engineering
- Electrical & Electronics Engineering
- Mechanical Engineering
- Information Science & Engineering
- Civil Engineering

**M Tech**
- Machine Design
- Signal Processing
- Computer Science & Engineering

**MBA**
- Marketing
- Human Resource
- Finance

**Ph.D**
- Mechanical Engineering
- Electronics & Communication
- Electrical & Electronics Engineering
- Master of Business Administration
- Mathematics
- Computer Science & Engineering
- Civil Engineering
- Physics
- Chemistry


State-of-the-art Infrastructure


Qualified and Committed Professors


Excellent Learning Ambience


Industry Collaborations


Research & Incubation Facility



Excellent Placements


Amenities for Holistic Personality Growth


Hostels for Boys & Girls

Gokulam 3rd Stage, Mysuru-02. ☎: 821-4276201-225, Fax: 251677
E-mail: principal@vvce.ac.in, ao@vvce.ac.in
Website: www.vvce.ac.in

Printed at mayur graphics,Bangalore